# ವರುಣ

ದಿವಂಗತ ಪೇಜಾವರ ಸದಾಶಿವರಾಯರು

ಕಾವ್ಯಪ್ರಕಾಶನ ಸಮಿತಿ—ಜಿ

# ಮುನ್ನುಡಿ

ದಿವಂಗತ ಪೇಜಾವರ ಸದಾಶಿವರಾಯರ ಕವನಸಂಗ್ರಹವು ಇಲ್ಲಿ ಪ್ರಕಟವಾಗುತ್ತಿದೆ. ಈ ಮಾತಿನಲ್ಲಿ ಒಂದು ಬಗೆಯ ಸಮಾಧಾನವಿದೆ, ಒಂದು ಬಗೆಯ ವೇದನೆಯಿದೆ. ಸಂಗ್ರಹವು ಪ್ರಕಟವಾಯಿತು, ಆದರೆ ಅದನ್ನು ನೋಡಲು ಸದಾಶಿವರಾಯರು ಇಲ್ಲ! ಹಿಂದೆ ಗೆಳೆಯರಾದ ಶ್ರೀ. ಗೋಕಾಕರಿಗೆ ಅವರು ಬರೆದ ಓಲೆಗಳಲ್ಲಿ 'ಪುಸ್ತಕರೂಪವಾಗಿ ಹೊರಗೆ ಬರುವ ಯೋಗ್ಯತೆಯಿದ್ದರೆ ಒಂದು ದಿನ ಬಂದೀತು.' ಎಂದಿದ್ದರು; 'ನನ್ನ ಕವನಗಳು ಪುಸ್ತಕರೂಪವಾಗಿ ಪ್ರಕಟವಾಗುವದರ ಬಗ್ಗೆ ನೀವು ನನಗೆ ಸ್ನೇಹ ಪೂರ್ವಕವಾಗಿ ಬರೆದ ಮಾತುಗಳನ್ನು ಓದಿ ಬಾಯ್ಕಟ್ಟಿದವನಾಗಿದ್ದೇನೆ.' ಎಂದೂ ಭಾವಯುತವಾಗಿ ಬರೆದಿದ್ದರು. ಕಾವ್ಯಪ್ರಕಾಶನ ಸಮಿತಿಯ ಪರ ವಾಗಿ ಈ ಸಂಗ್ರಹವು ಪ್ರಕಟವಾಗುತ್ತಿರುವುದನ್ನು ನೋಡಿದರೆ ದಿವಂಗತ ಕವಿಗೆ ನಾವು ಸಲ್ಲಿಸಬೇಕಾದ ಋಣವನ್ನು ಸಲ್ಲಿಸುತ್ತಿದ್ದೇವೆ ಎಂಬ ತೃಪ್ತಿಯ ಭಾವವು ನಮ್ಮನ್ನು ಆವರಿಸಿದೆ. ಈ ಋಣಸಂದಾಯಕ್ಕೆ ಅಣ್ಣನಲ್ಲಿ ಅತ್ಯಂತ ಗೌರವವಿಟ್ಟುಕೊಂಡ ಇಬ್ಬರು ತಮ್ಮಂದಿರ ನೆರವು ಮುಖ್ಯ ಪ್ರೇರಕವಾಯಿ- ತೆಂಬುದನ್ನು ನೆನೆಯ ಬೇಕು. ಶ್ರೀ. ಪೇಜಾವರ ವಾಸುದೇವರಾಯರು ಮತ್ತು ವೆಂಕಟರಾಯರು ಈ ಪ್ರಕಟನೆಯ ಎಲ್ಲವೆಚ್ಚಕ್ಕಾಗಿ ನಾಲ್ಕುನೂರು ರೂಪಾಯಿ ಗಳನ್ನು ನೀಡಿದ್ದಾರೆ. ಕವನಗಳ ಮೂಲ ಪ್ರತಿಯನ್ನೂ ಸದಾಶಿವರಾಯರ ಛಾಯಾಚಿತ್ರವನ್ನೂ ಒದಗಿಸಿ ಕೊಟ್ಟಿದ್ದಾರೆ. ಶ್ರೀ ವಾಸುದೇವರಾಯರು ಈ ವಿಷಯದಲ್ಲಿ ತೋರಿದ ಆಸ್ಥೆ ತುಂಬ ಮೆಚ್ಚುವಂಥದು. ಇವರಿಬ್ಬರಿಗೂ ಸಮಿತಿ ಬಹಳ ಕೃತಜ್ಞವಾಗಿದೆ.

ಸದಾಶಿವರಾಯರು ದಕ್ಷಿಣ ಕನ್ನಡದಲ್ಲಿ ಹುಟ್ಟಿ ಬೆಳೆದು ಇಟಲಿ ದೇಶ ದಲ್ಲಿ ಸಾವಿಗೆ ಬಲಿಯಾದರು. ಅವರು ಮಂಗಳೂರಿನಲ್ಲಿ ಶಾಲೆಯ ಶಿಕ್ಷಣ ಮುಗಿಸಿ ಕಾಶಿಯಲ್ಲಿ ಪ್ರೌಢವಿದ್ಯಾಭ್ಯಾಸವನ್ನು ನಡೆಸಿದರು, ಅಲ್ಲಿಯ ಕನ್ನಡ ಚಟುವಟಿಕೆಗಳಲ್ಲಿ ಅಗ್ರಭಾಗವನ್ನು ವಹಿಸಿದರು. ಮುಂದೆ ಸ್ಥಾಪತ್ಯಶಾಸ್ತ್ರದ

ವಿಶೇಷವ್ಯಾಸಂಗಕ್ಕಾಗಿ ಇಟಲಿಗೆ ಹೋದರು. ಅಲ್ಲಿ ವ್ಯಾಸಂಗ ಮುಗಿಸಿ ಪ್ರಬಂಧಬರೆದು ಭಾರತಕ್ಕೆ ಹಿಂದಿರುಗಬೇಕೆನ್ನುವಷ್ಟರಲ್ಲಿ ಘೋರವಾದ ರೋಗವು ತಗಲಿಕೊಂಡಿತು. ಅದರ ಯಾತನೆಯನ್ನು ಅನುಭವಿಸಿ ಆಸ್ಪತ್ರೆಯಲ್ಲಿಯೇ ಅವರು ತೀರಿಕೊಂಡರು. ಪರಿಪಕ್ವಗೊಳ್ಳುತ್ತಿರುವ ಮೇಧಾಶಕ್ತಿ–ಕವಿತಾಶಕ್ತಿಗಳುಳ್ಳ ತರುಣ ಕನ್ನಡಿಗನನ್ನು ಸಾವಿನ ಹದ್ದು ಕಚ್ಚಿಕೊಂಡು ಹೋಯಿತು. ಸಮರ್ಥಶಿಲ್ಪಿ, ಪ್ರತಿಭಾವಂತ ಕವಿಯೊಬ್ಬನನ್ನು ಕರ್ನಾಟಕವು ಕಳೆದುಕೊಂಡಿತು.

ಈ ಸಂಗ್ರಹದಲ್ಲಿ ೪೮ ಕವನಗಳಿವೆ. ಡಿ. ಸದಾಶಿವರಾಯರ ಸ್ವಂತ ಕೈ ಬರೆಹದ ವಹಿಯೊಂದರಿಂದ ಬಹುಭಾಗದ ಕವನಗಳನ್ನು ತೆಗೆದುಕೊಂಡಿದೆ. ಅವುಗಳಲ್ಲಿ ಕೆಲವು ಪತ್ರಿಕೆಗಳಲ್ಲಿ ಪ್ರಕಟವಾದುವು. ಅಲ್ಲದೆ ಅವರೇ ಸಂಪಾದಿಸಿದ ‘ ಅಲರು ’ ಸಂಗ್ರಹದಲ್ಲಿ, ಮಂಗಳೂರಿನ ಮಿತ್ರಮಂಡಳಿ ಸಂಪಾದಿಸಿದ ‘ ನಮ್ಮ ಕವಿತೆಗಳು ’ ಮತ್ತು ಉಡುಪಿಯ ಕಿರಿಯ ಪ್ರಪಂಚದವರ ‘ ಕಾವ್ಯ ಸಾಮ್ರಾಜ್ಯ ’ ಈ ಸಂಗ್ರಹಗಳಲ್ಲಿ ಈ ಮೊದಲು ಅವರ ಕೆಲವು ಕವನಗಳು ಪ್ರಕಟವಾದುವು. ಎಲ್ಲಕಡೆಗಳಿಂದ ಅವರು ಬರೆದ ಎಲ್ಲ ಕವನಗಳನ್ನು ತೆಗೆದುಕೊಂಡು ಇಲ್ಲಿ ಸಂಗ್ರಹಿಸಲಾಗಿದೆ ಎಂದು ತಿಳಿದಿದ್ದೇವೆ. ಆದರೆ ನಮಗೆ ತಿಳಿಯದೆ ಕೆಲವು ಉಳಿದಿರಬಹುದು. ತಿಳಿದ ಮಿತ್ರರು ಈ ಸಂಗ್ರಹ ನೋಡಿದ ಮೇಲೆ ನಮಗೆ ತಿಳಿಸಬೇಕು. ಇಟಲಿಯಿಂದ ಬಂದ ಪೆಟ್ಟಿಗೆಯಲ್ಲಿ ಏನಾದರೂ ಕವನಗಳಿದ್ದವೇ ಎಂದು ವಿಚಾರಿಸಲಾಯಿತು. ಅದಕ್ಕೆ ಇಲ್ಲ ಎಂದು ಉತ್ತರಬಂದಿದೆ. ಈ ಸಂಗ್ರಹದಲ್ಲಿ ಕಾಲಕ್ರಮವನ್ನು ಇಟ್ಟುಕೊಂಡಿಲ್ಲ. ಆದರೂ ಹೆಚ್ಚು ಪರಿಪಕ್ವ ಮತ್ತು ಆಧುನಿಕ ಕವನಗಳನ್ನು ಮೊದಲುಕೊಟ್ಟು ಕ್ರಮೇಣ ಹಳೆಯ ಪ್ರಾರಂಭಿಕ ಕವನಗಳನ್ನು ಪವಣಿಸಲಾಗಿದೆ. ದಿವಂಗತರ ಕವನಗಳೆಲ್ಲ ಒಂದುಕಡೆಗೆ ಸಂಗ್ರಹವಾಗಿರಲಿ ಎಂಬ ಉದ್ದೇಶದಿಂದ ಯಾವನ್ನೂ ಬಿಟ್ಟಿಲ್ಲ. ಅವರಾಗಿ ಸಂಗ್ರಹಮಾಡಿದ್ದರೆ ಕೆಲವನ್ನು ಬಿಡುತ್ತಿದ್ದರೆಂದು ತೋರುತ್ತದೆ. ಶ್ರೀ ಗೋಕಾಕರಿಗೆ ಬರೆದ ಒಂದು ಓಲೆಯಲ್ಲಿ ‘ ನಿಮಗೆ ಮೆಚ್ಚಿಗೆಯಾಗದ ‘ಕವಿ’ ಮತ್ತು ‘ಯಾತ್ರಿಕರು’ಇವನ್ನು ಸಂಗ್ರಹದಿಂದ ತೆಗೆದುಹಾಕಿ ಈ ಹೊಸ ನಾಲ್ಕು ಕವನಗಳನ್ನು ಸೇರಿಸಿದ್ದೇನೆ’ ಎಂದು ಅವರು ಹೇಳಿದ್ದಾರೆ. ಇನ್ನೂ ಕೆಲವನ್ನು ಅವರು ತೆಗೆದು ಹಾಕುತ್ತಿದ್ದ

ರೇನೋ. ಅವರ ಕವಿತಾಶಕ್ತಿಯ ಪ್ರಾರಂಭ, ವಿಕಾಸಗಳನ್ನು ತಿಳಿದು ಕೊಳ್ಳುವ ದೃಷ್ಟಿಯಿಂದ ಉಪಲಬ್ಧವಾದ ಎಲ್ಲವನ್ನು ಸಂಗ್ರಹಿಸುವುದು ನಮಗೆ ಸೂಕ್ತವೆಂದು ತೋರಿತು. ಈ ಸಂಗ್ರಹಕ್ಕೆ 'ವರುಣ' ಎಂದು ಕರೆ ದಿದ್ದೇವೆ. ಅದಕ್ಕೆ ಕಾರಣವಿದೆ. ಅದು ಇಲ್ಲಿ ಮೊದಲನೆಯ ಮತ್ತು ಸುದೀರ್ಘ ವಾದ ಕವನ. ಅಲ್ಲದೆ ಸದಾಶಿವರಾಯರ ಶ್ರೇಷ್ಠಕೃತಿ, ಹೊಸಗನ್ನಡಕಾವ್ಯಕ್ಕೆ ಅವರ ಹಿರಿಯ ಕಾಣಿಕೆ. ವಿದೇಶಕ್ಕೆ ಹೋಗಿ ಕೆಲಕಾಲ ತಣ್ಣಗಾಗಿದ್ದ ಅವರ ಪ್ರತಿಭೆ ಒಬ್ಬ ಸಹೃದಯಮಿತ್ರನ ಉಚಿತವಿಮರ್ಶೆಯಿಂದಲೂ ಪ್ರಚೋದನೆ ಯಿಂದಲೂ ಒಮ್ಮಿಂದೊಮ್ಮೆಲೆ ಚೇತರಿಸಿಕೊಂಡೆದ್ದಿತು. ತಾನು ಕಂಡುಂಡ ನವೀನ ಅನುಭವಗಳಲ್ಲಿ ಸಾಮರಸ್ಯ ಹೊಂದಿ ಕವಿಜೀವವು ಉಜ್ವಲ ಅಭಿವ್ಯ ಕ್ತಿಗೆ ಅಣಿಯಾಯಿತು. ಇಂಥ ಅಭಿವ್ಯಕ್ತಿಯುಳ್ಳ ಮೂರುನಾಲ್ಕು ಕವನ ಗಳಲ್ಲಿ 'ವರುಣ'ವು ಶ್ರೇಷ್ಠವಾದುದು. ಈ ಕವನವನ್ನು ವಿಮರ್ಶಿಸುತ್ತ ಶ್ರೀ ಗೋಕಾಕರು ಹೀಗೆ ಹೇಳಿದ್ದಾರೆ : "'ವರುಣ' ಇಂದಿನ ಕನ್ನಡದ ಶ್ರೇಷ್ಠತಮ ನೀಳ್ಗವನಗಳಲ್ಲಿ ಅಗ್ರಪಂಕ್ತಿಗೆ ಸೇರಿರುವದೆಂಬುದರ ಬಗ್ಗೆ ಎಳ್ಳಷ್ಟೂ ಸಂಶಯವಿಲ್ಲ; ಅಲ್ಲದೆ ಯಾವ ಕಾಲದ್ದೇ ಆಗಲಿ, ಯಾವ ಭಾಷೆ ಯದೇ ಆಗಲಿ,-ಯಾವ ಉತ್ತಮ ಕವನವನ್ನೂ ಅದು ಸರಿಗಟ್ಟಿ ನಿಲ್ಲಬಹುದು. ಕೀಟ್ಸ ಕವಿಯ ಪಿಕಲಕ್ಕಿಯನ್ನು ಕುರಿತು ಬರೆದ ಓಡಿನ ಜೊತೆಗೆ-ಶೆಲ್ಲಿ ಕವಿಯ ಪಡುವಣದ ಬಿರುಗಾಳಿಯನ್ನು ಕುರಿತು ಬರೆದ ಓಡಿನ ಜೊತೆಗೆ ಸಹ-ನಿಲ್ಲಲು ಸದಾಶಿವರಾಯರ ಈ ಕವನವು ಅರ್ಹವಾಗಿದೆಯೆಂದು ಓದುಗರಿಗೆ ಇಷ್ಟರಲ್ಲಿ ಹೊಳೆದಿರಲು ಸಾಕು. ಮರುತ್ ದೇವನ ದರ್ಶನವಾಗಿ ಶೆಲ್ಲಿಯು ತನ್ನ ಓಡನ್ನು ಬರೆದ. ವರುಣನ ಸಾಕ್ಷಾತ್ಕಾರವಾಗಿ ಸದಾಶಿವ ರಾಯರು ಇದನ್ನು ಬರೆದರು." 'ನಾಟ್ಯೋತ್ಸವ'ದಲ್ಲಿ ವಿದೇಶೀಯ ನೃತ್ಯ ದಲ್ಲಿಯ ಭೋಗದ ಉನ್ಮಾದ, ನೃತ್ಯದ ಲಯಸೂಚಕವಾದ ಪದಯೋಜನೆ ಬಹಳ ಸೊಗಸಾಗಿ ಬಂದಿವೆ. ಎರಡರಲ್ಲಿಯೂ ಅನುಭವ, ಚಿತ್ರ, ಶಬ್ದ ನವೋನವವಾಗಿವೆ.

ಉಳಿದನೇಕ ಕವನಗಳನ್ನು ಸದಾಶಿವರಾಯರು ತಮ್ಮ ನಾಡಿನ ಆವರಣದಲ್ಲಿ ಹೊಸಕನ್ನಡ ಕಾವ್ಯದ ರೂಢರೀತಿಯಲ್ಲಿ ಬರೆದಿದ್ದಾರೆ. ಅವು ಗಳಲ್ಲಿ ಅನುವಾದಗಳಿವೆ, ಅನುಕರಣಗಳಿವೆ, ಪ್ರಯೋಗಗಳಿವೆ. ಅವುಗಳಲ್ಲಿ

ವಿಮಾನ, ಆಟಿಯ ಹುಣ್ಣಿಮೆ, ಸ್ವಾತಂತ್ರ್ಯ ಭೈರವದಂಥ ಕವನಗಳು ಒಂದು ಉತ್ಸಾಹ, ಒಂದು ಕೆಚ್ಚು ಇವನ್ನು ಉಜ್ವಲವಾಗಿ ಮೂಡಿಸಿರುತ್ತವೆ. ಲಕ್ಕಣ, ಉಲ್ಕೆ, ಮೌನ, ಮೊರೆ, ತಾಜಮಹಲ್, ಪ್ರಕೃತಿಗೆ, ಬೆಡಗಿ, ಕೇಳಿದ ಕೋಗಿಲೆಗೆ, ಒಡಲ ಕಾಣಿಕೆ, ಕರೆ ಮುಂತಾಗಿ ಕೆಲವು ತಕ್ಕಮಟ್ಟಿಗೆ ಚೆನ್ನಾದ ಕೃತಿಗಳಾಗಿವೆ. ಮರಣವನ್ನು ಕುರಿತ ಕವನಗಳು ಬರೆದಾಗ ಸಹಜ ವಾಗಿದ್ದರೂ ಈಗ ಭೀಕರಧ್ವನಿಯಿಂದ ಮೊರೆಯುತ್ತವೆ. ಮಾಯಕದ ಮಸಣ, ಜವರಾಯ, ಜನನ ಮರಣ, ಸಾವು— ಇವು ಬೇಗ ಬರುವ ಸಾವಿಗೆ ಕವಿಯ ಮನಸ್ಸನ್ನು ಸಿದ್ಧಗೊಳಿಸುವದಕ್ಕಾಗಿ ಬಂದ ಕವಿತೆಗಳಂತೆ ತೋರು ತ್ತವೆ. ‘ ಸಾವು ಸಹಜವು ನಿಜವೆ. ಸಾವಿಲ್ಲದೊಡೆ ಬಾಳು ನೋವಿನೋಲಗ ’ ಎಂದು ಕವಿ ಅಂದುಬಿಡುತ್ತಾನೆ. ಇಂಥ ಕವಿತೆಗಳಲ್ಲಿ ‘ಕರ್ತವ್ಯ’ ಎಂಬುದು ಸಾವಿನ ಮುನ್‌ಸೂಚನೆಯನ್ನು ಕವಿಗೆ ಮಾಡಿಕೊಟ್ಟ ಕನಸಿನ ನಿರೂಪಣೆ ಯಾಗಿದೆ. ಕನಸಿನಲ್ಲಿ ಅಸ್ಥಿದೇಹದ ಜನರ ನೋಡಿ ಕವಿಗೆ ಭಯವಾಗಲು ‘ ಇನ್ನು ನಡೆದರೆ ಮುಂದೆ ಅಳಿಗಾಲ ಬಂತು ಹಿಂತಿರುಗು ಹಿಂತಿರುಗು ಮನೆ ಯತ್ತ ಹೋಗು ಸಿರಿಸುಖಗಳಿಹವಲ್ಲಿ ಈ ಹುಚ್ಚ ನೀಗು ’ ಎಂದು ಆಸೆ ಹೇಳಿತಂತೆ. ಆದರೆ ಕರ್ತವ್ಯಶಕ್ತಿ ‘ ನಡೆಮುಂದೆ ನಡೆಮುಂದೆ ಹಿಂತಿರುಗ ಬೇಡ ಬಂದ ದಾರಿಯಲೀಗ ನುಗ್ಗಿ ಮುಂದೋಡ ಈ ದಾರಿ ತೋರುವುದು ಸಗ್ಗದಾ ನೆಲೆಯ ’ ಎಂದಿತಂತೆ. ‘ ನಡೆ ಮುಂದೆ ಕೊಡು ಬೇಗ ಆತ್ಮಬಲಿ ನನಗೆ’ ಎಂದೂ ಅದು ಬೇಡಿತಂತೆ. ಕವನದ ಕೊನೆಗೆ ‘ ಆತ್ಮಬಲಿ ನನಗೆ ’ ಎಂಬುದು ಮೂರು ಸಲ ಪುನರುಕ್ತವಾಗಿದೆ. ನಾಡನ್ನು ಬಿಟ್ಟು ಪರದೇಶಕ್ಕೆ ಹೊರಟಾಗ ಸದಾಶಿವರಾಯರಿಗೆ ಈ ಭವಿಷ್ಯಸೂಚಕವಾದ ಕನಸು ಬಿದ್ದಿರ ಬಹುದೇನೋ ಎಂದು ಭಾಸವಾಗುತ್ತದೆ. ಅವರು ಕರ್ತವ್ಯಶಕ್ತಿಯ ಮಾತು ಕೇಳಿ ಮುನ್ನಡೆದರು, ಅದಕ್ಕೆ ಆತ್ಮಬಲಿಯನ್ನು ಕೊಟ್ಟರು. ಹೀಗಾಗಿ ಅವರೇ ಅತ್ಯಂತ ಸಾಭಿಪ್ರಾಯವಾಗಿ ಈ ಸಂಗ್ರಹದ ಕೊನೆಯ ಕಿರುಕವನ ದಲ್ಲಿ ಹೇಳಿದಂತೆ ಅವರ ಬಾಳು ‘ ಮುರಿದ ಮುರಲಿ ’ಯಾಯಿತು. ‘ ಜೀವನವು ಪುಡಿಮಾಡಿದೊಡಲಿನಾ ಪಾಡು ಬಿರುಕೆದ್ದ ಕೊಳಲಿನಂತೆ. ಮುರಿದ ಮುರಲಿಯು ನಾನು. ಎನ್ನೊಡಲ ನೀನು ಕೌಶಲದಿ ಮುರಿದೆ ಯಂತೆ.’ ಇಂಥ ಕವನಗಳನ್ನು ಕಣ್ಣಿಟ್ಟು ನೋಡಿದರೆ ಸದಾಶಿವರಾಯರು

ಪ್ರತಿಭಾಶಾಲಿಯಾದ ಕವಿಯಾಗಿದ್ದಂತೆ ಹಿಂದುಮುಂದುಗಳನ್ನು ಅರಿತು ಕೊಳ್ಳುವ ಅಂತಃಪ್ರೇರಣೆಯ ಕೇಂದ್ರ ಜಾಗೃತವಾದ ಜೀವಿಗಳಾಗಿದ್ದರು ಎಂದು ಊಹಿಸಬಹುದು. ಇಂಥವರನ್ನು 'ಬೆಳೆಯುವ ಮುನ್ನ ಕೊಯ್ಯುವರೆ ಹೇಳಾ' ಎಂದು ಕೇಳುವುದಕ್ಕೆ ಅನುವುಗೊಡದೆ ವಿಧಿ ತನ್ನ ಕೆಲಸ ಮಾಡಿತು. 'ಹೃದಯದ ನಂದಾದೀಪವು ಹತ್ತುವಷ್ಟರಲ್ಲಿಯೇ ಅವರ ಬಾಳ ಹೊನಲು ಬತ್ತಿಹೋದದ್ದು ಕನ್ನಡದ ನಷ್ಟಪರಂಪರೆಗಳಲ್ಲಿ ಒಂದಾಗಿದೆ. ಇಂಗ್ಲಂಡಿನ ಮಹಾಕವಿಗಳಲ್ಲಿ ಇಬ್ಬರಾದ ಶೆಲ್ಲಿ ಹಾಗೂ ಕೀಟ್ಸರು ಇಟಲಿ ಯಲ್ಲಿಯೇ ತಮ್ಮ ಚಿಕ್ಕ ವಯಸ್ಸಿನಲ್ಲಿ ಮರಣಹೊಂದಿದರು. ಇಂದಿಗೂ ರೋಮದಲ್ಲಿ ಅವರ ಗೋರಿಗಳನ್ನು ಕಾಣಬಹುದು. ಶೆಲ್ಲಿ–ಕೀಟ್ಸರು ಪಾಡು ಗಾಯಿಯಾದಮೇಲಾದರೂ ಉದುರಿದರು. ಆದರೆ ಕನ್ನಡದ ಮಹಾಕವಿ ಯೊಬ್ಬನನ್ನು ಹೀಚಿನಲ್ಲಿಯೇ ಸೆಳೆದುಕೊಂಡ ಇಟಲಿಯ ಮಳಲಿಗೆ ನಾವೇನೆನ್ನಬೇಕು ?' ಎಂದು ಶ್ರೀ ಗೋಕಾಕರು ವ್ಯಕ್ತಮಾಡಿದ ಮರುಕಕ್ಕೆ ನಾವೂ ದನಿಗೂಡಿಸುತ್ತೇವೆ. ಕನ್ನಡ ಕಾವ್ಯರಸಿಕರು ಸದಾಶಿವರಾಯರ ಈ ಸಂಗ್ರಹವನ್ನು ಮಮತೆಯಿಂದ ಬರಮಾಡಿಕೊಂಡು ಅವರ ಕೃತಿಗಳ ರಸ ಗ್ರಹಣ ಮಾಡುವರೆಂದು ನಂಬುತ್ತೇವೆ.

ಈ ಸಂಗ್ರಹದ ಅಚ್ಚಿನ ಪ್ರತಿಯನ್ನು ಸಿದ್ಧಪಡಿಸಿ ಅಚ್ಚೋಲೆಗಳ ನ್ನೋದಿ ಅನೇಕ ಬಗೆಯಲ್ಲಿ ನೆರವಾದ ಶ್ರೀ ಹುಯಿಲಗೋಳ ವರದರಾಜ ರಿಗೂ ಇದನ್ನು ಲಲಿತವಾಗಿ ಮುದ್ರಿಸಿದ ಲಲಿತ ಮುದ್ರಣಾಲಯದ ಮಿತ್ರ ರಿಗೂ ನಮ್ಮ ನೆನಕೆಗಳು ಸಲ್ಲುತ್ತವೆ.

ವಿಶ್ರಾಮಬಾಗ
೨೩–೬–೧೯೫೨

ರಂ. ಶ್ರೀ. ಮುಗಳಿ

# ಪ ರಿ ವಿ ಡಿ



ದಿವಂಗತ ಪೇಜಾವರ ಸದಾಶಿವರಾಯರು

# ವರುಣ

ಇಂದು ಸಂಧ್ಯೆ ಎನ್ನ ಕೊಠಡಿ
ಗುಪ್ತ ಸಂಕಟಗಳ ದುರ್ಗ !
ಮನೆಯ ಮೆಟ್ಟಲಿಳಿಯೆ ಮಹಾ
ನಗರವಿದರ ಮಾಯಮಾರ್ಗ !
ಆಕಾಶವು ಮುಸುಕಿದ್ದರು
ಬಿಸಿಲ ರಂಗು ಮಿರುಗುತಿಹುದು
ಕುಳಿರ್ಗಾಳಿ ಬೀಸಿದ್ದರು
ಬೆಪ್ಪಿನೊಪ್ಪ ಸಂಜೆಗಿಹುದು
ಬಾನ ಮೂಲೆಯಿಂದ ತಾರೆ
ಯೊಂದು ಕಣ್ಣ ಮಿಟುಕುತಿಹುದು
ದಾರಿಯುದ್ದ ಸಾಲುದೀಪ
ಮಿಣುಕಿ ಕೆಣಕಿ ಕರೆಯುತಿಹುದು
ನಾಲ್ಕು ಕಡೆಗೆ ನೇಹನಗೆಗೆ
ಎನ್ನ ಹೃದಯವರಳಿ ಮನಸು
ಮಿಡುಕ ಮುಸುಕ ಹರಿದಿದೆ;
ಬೇಸರಿಕೆಯ ಕೋಟೆಯಿಂದ
ಯೋಚನೆಗಳ ಬಾಗಿಲೊಡೆದು
ನಸುಕಿನೊಡನೆ ಬೆರೆತಿದೆ;
ಕುದಿವ ಜೀವ ಕೊಚ್ಚಿಹರಿವ
ಜನೋದಧಿಯ ಊರ್ಮಿಯೊಡನೆ
ಉಕ್ಕುತೊಂದು ವೀಚಿಯಾಗೆ
ನನ್ನ ಕರೆದಿದೆ !
ನೂರು ಮಾರು ನಡೆಯಲಿಲ್ಲ
ಸ್ವಾನುಭವದಿ ಬಾನನರಿತೆ !

ದಿವಾನಿಶೆಯ ಸಂಗಮದಲಿ
ಕುಣಿವ ದಿಕ್ತಟಾಕದಲ್ಲಿ
ಅಪ್ಸರೆಯರ ಅಮರ ಗಾನ
ಕೇಳಿತೆಂದು ಭ್ರಮಿಸಿಕೊಂಡ
ಧ್ವನಿಯು ಬರಿ ಮರೀಚಿಕೆ !
ಬೀಸುತಿದ್ದ ಗಾಳಿಯಲ್ಲಿ
ಕೇಶಕಿಂತ ಸೂಕ್ಷ್ಮವಾದ
ನೀರ ಕಣವು ಸೇರಿಕೊಂಡ
ಸುವ್ವಿಸೇಸೆಯಲ್ಲಿ ಕಂಡೆ
ಸೀರುಮಳೆಯ ಸೂಚಿಕೆ !
ಯಾವ ಮುಗಿಲ ಕೋವಿಯಲ್ಲೋ
ಸಿದ್ಧವಾದ ನೀರು ಬೆಳ್ಳಿ
ಸೂಜಿಯಂತೆ ಕೆಳಗೆ ಕರೆದು
ಗಾಳಿಹೊಯ್ದು ಕಡೆಗೆ ಹರಿದು
ಮೌಕ್ತಿಕಗಳ ತುಂತುರಂತೆ
ಥಳಥಳಿಸುವ ಮಣಿಗಳಾಗಿ
ನನ್ನ ಮುಖವ ಮುತ್ತಿಕೊಂಡು
ಉಸಿರಿನೊಡನೆ ಸೇರಿತು !
ಕಟ್ಟ ಬೇಸಗೆಯಲಿ ಬೆಂದ
ತಪ್ತವಾದ ಮೃತ್ತಿಗೆಯಲಿ
ಮೊದಲ ಹನಿಯ ಸಿಂಚನಕ್ಕೆ
ಉದ್ಭವಿಸಿದ ನೆಲದ ಗಂಧ
ಮಲರಿನಲ್ಲಿ ಮಲೆತುಕೊಂಡು
ಮಳೆಗಾಲವು ಇಳೆಗಿಳಿದಿಹ
ಮೊದಲ ಸುದ್ದಿ ಸಾರಿತು !
ಮಳೆಗಾಲದ ಮೊದಲ ಹನಿಯು !
ಎನ್ನ ಅಧರಕಮೃತ ಝುರಿಯು !

ಆಸರಿನಲಿ ಆಸೆಯಲ್ಲಿ
ಹೀರಿ ಹೀರಿ ನನ್ನ ನಾಡಿ
ನರಗಳೆಲ್ಲ ಉಬ್ಬಿಕೊಂಡು
ಮತ್ತನಾಗಿ ಸುತ್ತಲೆಲ್ಲ
ಹೊಸ ಬೆಳಕಿನ ಹೊಸ ಬಾಳಿನ
ಭೂಷಣಗಳ ಸೂಚನೆಗಳನು
ಕೊನರುತಿಹುದು ಕಂಡೆನು.
ಶಬರರಟ್ಟಹಾಸದಿದುರು
ಕರಿಯ ಗಜದ ಗುಂಪಿನಂತೆ
ಅಂಬರದಲಿ ಕಾಳಮೇಘ–
ವಳಿಯು ಚಲನವಲನ ಕಂಡು
ಇಂದು ರಾತ್ರಿ ಚೈತನ್ಯದ
ವೀರಕವಚ ಧರಿಸಿ ಧಾತ್ರಿ
ನಡೆದಿರುವಳು ಸಡಗರದಲಿ
ಘೋಷಯಾತ್ರೆಗೆಂದೆನು.

ನಸುಕು ನಿಶೆಯ ಮರೆಗೆ ಜಾರೆ
ಪುಡಿಹನಿಗಳು ಪುಷ್ಪವಾಗಿ
ತಿರಿತಿರಿತ್ತಿರಿತ್ತಿರೆಂದು
ನಲಿವು ನಗುತ ಇಳಿದು ಬಾರೆ,
ಸರಿಗೆಯಲಿ ತೂಗುತಿರುವ
ಸಾಲುದೀಪ ಗಾಳಿಯಲ್ಲಿ
ರಬ್ಬರಂತೆ ಮಣಿವ ಕುಣಿವ
ಕಿರಣ ಕೋಟಿಗಳನು ನೀರ
ಧಾರೆಯಲ್ಲಿ ಮೀಯಿಸುತಿರೆ
ಜೀವನದಿಯ ದಿನಚರಿಯಲಿ
ಜೀವನವನು ಚುಂಬಿಸುತಿಹ
ಯಾವ ಬಾನ ಬಿಂಬಿಸದಿಹ

ಮಾರ್ಗಗಳಸ್ಪಾಳ್ಬಿನಲ್ಲಿ
ಅಲ್ಲಿ ಇಲ್ಲಿ ನೂರು ಸಣ್ಣ
ನೀರ ದರ್ಪಣದಲಿ ಇಂದು
ಇಂದ್ರಚಾಪದೆಲ್ಲ ಬಣ್ಣ
ಕೂಡಿ ಮಿರುಗಿ ಕರಗುತಿದೆ,
ಅಜ್ಞಾತ ಶಕ್ತಿಯೊಂದು
ನಡಿಗೆಗೊಂದುಂ ಅವಸರವನು
ಬಿತ್ತಿ ನನ್ನನಾವ ಕಡೆಗೊ .
ಸೆಳೆದುಕೊಂಡು ಹೋಗುತಿತ್ತು.
ವಿದ್ಯುತ್ತಿನ ಹಗ್ಗವನ್ನು
ದಿಕ್ಕಿಗಿಂದ ದಿಕ್ಕಿಗೆಳೆದು
ಮೃದುಮೃದಂಗ ಸ್ವರಕೆ ಕಡಲ
ದೊಂಬರನ್ನು ಬಾಂಗೆ ಸೆಳೆದು
ಕಾಣದ ಕೈ ಅಂಬರದಲಿ
ಚುಕ್ಕೆಗಳನು ಹೆಕ್ಕುತ
ಕರಿಬೊಗಸೆಯಲಿಕ್ಕುತ
ಮುಗಿಲಿನಂಗಳದಲಿ ಈಗ
ಯಾವ ಆಟ ಹೂಡಿದೆ ?
ಮೇದಿನಿಯ ಒಯ್ಯಾರದೊನವು
ಅರೆನಿಮಿಷದಲಿ ಮಾಯವಾಯ್ತು !
ಮುಖದ ಮೇಲೆ ರೌದ್ರಮುದ್ರೆ
ಮೂಡಿ ಭಾವ ಬದಲಿತು !
ಬರ್ದಿಲದಲಿ ಜಲದ ಕೊಳಗ
ಸ್ಥಾನದಿಂದ ಕದಲಿತೊ !
ನೀರು ಕಟ್ಟೆ ನೀರು ಸುರಿಯೆ
ಮತ್ತೆ ಭಗೀರಥನ ಶಿರದ
ಮೇಲೆ ಮುಗಿಲಗಂಗೆ ಹರಿದು

ಬರುವಳೇನೊ ಎಂದುಕೊಂಡು
ಕುತೂಹಲದಿ ನೋಡಿದೆ !
ಇಳೆಯುಲೊಂದು ನವಸೆಳೆ
ಪ್ರಳಯದಂತೆ ಕೋಲ್ಮಿಳೆ !
ದೇವಲೋಕ ದ್ವಾರದಲ್ಲಿ
ಮೇಘದುರ್ಗದರೆಮರೆಯಲಿ
ಇಂದ್ರಪದವಿಯೊಡೆತನಕ್ಕೆ
ಇಂದು ರಾತ್ರಿ ಮರಳಿ ಸಿಡಿದ
ಸುರಾಸುರರ ಸಮರದಲ್ಲಿ
ಇಂದ್ರಾಯುಧ ಚಂದ್ರಾಯುಧ
ಗಗನದಲ್ಲಿ ಹೊಂಚಿ ಮಿಂಚಿ
ಪ್ರಳಯ ವರ್ಷ ಧಾರೆಗೊಂದು
ಪ್ರಭೆಯ ಹಿನ್ನೆಲೆಯನು ಕಟ್ಟಿ
ಕರಿಯ ಬಾನ ಬೆಳಗಿತೊ !
ನರಕನದಿಯ ಕಡವಿನಲ್ಲಿ
ಕಾವಲಿದ್ದ ಮಹಾಶ್ವಾನ
ಚರ್ಬರನಿಗೆ ಯೊವ ಅನಿ-
ಚ್ಛಿತನ ನೆರಳ ಸುಳಿವು ಕಂಡೊ
ಕೋಪ ಕೆರಳಿ ಮೂರು ಕೊರಳ
ನರಗಳುಬ್ಬಿ ಶಬ್ದಕೊಬ್ಬಿ
ನರರರಿಯದ ಒಂದು ಬೊಗಳು
ಪಾತಾಳದ ಜಠರದಿಂದ
ಭೂತಳಕ್ಕೆ ಸೀಳಿ ಬಂದು
ಎಂಟು ದಿಕ್ಕನಲೆದು ಕೊನೆಗೆ
ನೀರಿನೊಡನೆ ಸಮರ ಹೂಡಿ
ಮಿಂಚಿನೊಡನೆ ಕಲೆತು ಕೂಡಿ
ಸಿಡಿಲಿನಂತೆ ಹೊಡೆಯಿತೊ !

ನಾಗಲೋಕ ದತ್ತಣಿಂದ
ನಾಗಿಣಿಯರ ಹುತ್ತದಿಂದ
ಬುಸ್ಸೆಂದು ಹಿಸ್ಸೆಂದು
ಕೋಟಿಯುಸಿರು ಏರಿಬಂದು
ಬಾನನಳೆವ ಸಾಹಸದಲಿ
ಮುಗಿಲಹತ್ತಿ ದಿಕ್ಕ ಸುತ್ತಿ
ಯೌವನದುನ್ಮಾದದಲ್ಲಿ
ಮಳೆಯ ಕೂಡಿ ಕ್ರೀಡಿಸುತ್ತ
ಸೃಷ್ಟಿಯನ್ನು ಪೀಡಿಸುತ್ತ
ಸುಳಿವ ಸುಂಟರಾಯಿತೊ !
ಚಪ್ಪರಿಸುವ ಚಬುಕಧ್ವನಿಯು-
ನೆದುರಿಪ ಸಾಹಸದಲೆರಡು
ಕಾಲಲೊಮ್ಮೆ ನಿಂತು ಕೊನೆಗೆ
ಚದರುತಿರುವ ಹಯದ ಹಿಂಡು;
ಮೇವ ಮೊಲದ ಹೊಲದ ಮೇಲೆ
ಕೋವಿಸದ್ದು ಸಿಡಿದು ಬೀಳೆ
ಮರೆಯ ನೂರು ಬಿಲಗಳಿಂದ
ಹೊರಗಿಣುಕುವ ಮೊಲದ ಪುಂಡು;
ದಾರಿಯೆಲ್ಲ ನೀರಾದರು
ನಡೆವೆವೆಂಬ ನಿರ್ಧರದಲಿ
ಹೊರಟು ಬಾನಿನಿಂದ ನೀರಿ-
ನೊನಕೆ ಇಳಿಯುವದನು ಅರಿತು
ಇದರ ಜೋಗಿನಲ್ಲಿ ಎದೆಯು
ಕೆಚ್ಚು ಕರಗಿ ಕೊಚ್ಚಿ ಹೋಗಿ
ಕಂಡ ಮನೆಯ ಮಾಡಿನಡಿಯ
ತಂಗಿನಲ್ಲಿ ಕಾಯ್ವುದೊಂದು
ಬೇಸರದಲಿ ಬಳಲಿಕೆಯುಲಿ

ತಪತಪಿಸುವ ಜನದ ದಂಡು
ಯಾವ ಚಿತೆಯಲುರಿಯುವೆನ್ನ
ಆತ್ಮವನ್ನು ತಣಿಸಲೆಂದೊ,
ಬಾಳ ಭಾರ್ಗವಿಯಲಿ ಜಲವು
ಸತತ ಹೊಮ್ಮಿ ಹರಿಯಲೆಂದೊ,
ಯಾವ ಧ್ವನಿಯು ಗುಪ್ತಕರೆಗೆ
ವಿಧಿಯ ಸೂಚನೆಯಿದೊ ಎಂದೊ,
ನೇರವಾಗಿ ವಾರಿಯೊಡನೆ
ದಾರಿನಡೆದೆ, ನಡೆದು ನಡೆದು
ಕೊನೆಗೆಯೊಂದು ನಿಮಿಷದಲ್ಲಿ
ಮೇಲಿನಿಂದ ಕರೆದು ಕರೆದು
ನೀರು ಕೂಡ ಉಬ್ಬಸದಲಿ
ತೊದಲುತಿಹುದ ಕಂಡೆ; ಬಳಿಕ
ಬೇಸರದಲೊ ಬೇನೆಯಲ್ಲೊ
ಸೂಕ್ಷ್ಮವಾದ ಹೊಗೆಯ ಹಾಗೆ
ಬುವಿಯ ಬಸಿರ ಬಗೆದುಕೊಂಡು
ಯಾವ ತಿದಿಯ ಬಲದಲೆದ್ದೊ
ಕೆಮ್ಮಿ ಕೆಮ್ಮಿ ಬುಗ್ಗೆಯಾಗಿ
ಚಿಮ್ಮುತಿಹುದ ಕಂಡುಕೊಂಡೆ

ಬಾಳಶರಧಿ ಮಥನದಲ್ಲಿ
ನಗರಮೇರುವನ್ನು ಸುತ್ತಿ
ಬಾಳುವೆಗಳ ಕಡೆದು ಕಡೆದು
ದಿನದ ಕೊನೆಗೆ ರಜನಿಯಲ್ಲಿ
ಅಸುವ ತೊರೆದ ವಾಸುಕಿ ಈ
ಜನವಿಹೀನವಾದ ಕಾಳ
ವೀಥಿ! ಇದರ ಉದರದಲ್ಲಿ

ಅಲ್ಲಿ ಇಲ್ಲಿ ಸಿಡಿದು ಕಾರ್ವ
ಕೆಂಪು ಬಿಳಿದು ನೀರ ನೊರೆಯು
ವಿಷದ ನೊರೆಯು ಗುಗ್ಗುಳಿಪುದು.
ಬಂಟಿಯಾಗಿ ಒದ್ದೆಯಾಗಿ
ನೀರಹೊಯ್ಲಿನೇಕನಾದ–
ನೀರವದಲಿ ನಡೆಯುವೆನ್ನ
ಹೆಜ್ಜೆಯಿದಕೊ ಮುಗ್ಗರಿಸುತ
ಕುಗ್ಗುತಿಹುದು. ಆದರೆನ್ನ
ಮನದ ಪಕ್ಷಿ ಗರುಡವೇಗ-
ದಿಂದ ವಿಶ್ವವನ್ನು ಅಲೆದು
ಮೋದದಿಂದ ಹಿಗ್ಗಿರುವುದು.
ಹೃದಯಗುಡಿಯ ಸೊಡರಿನಲ್ಲಿ
ಪ್ರಭಾಕಿರಣ ಪ್ರಜ್ವಲಿಪುದು.
ಉರ್ವಶಿಯರ ನಾಟ್ಯದಂತೆ
ಎನ್ನ ಜೀವ ನಲಿಯುತಿಹುದು.
ಕಿರುನೆನಪಿನ ಕೀಟಮಾತ್ರ
ನಲ್ಲನಸಿನೀ ಚೆಲ್ವನಳಿಸೆ
ಸೂಜಿಮುಖದ ಮುಳ್ಳಿನಿಂದ
ಮೆಲ್ಲನೆನ್ನ ಕೀರುತಿಹುದು :-
ಏಥೂಳಿಗೆ ಬೇಗಾಳಿಗೆ
ನಿನ್ನ ಕಿಟಕಿ ತೆರೆದಿದೊ ?
ಕಾರ್ಮುಳೆಯಲಿ ನೀರ್ಗುದ್ದುತ
ಕಿಟಕಿಯೊಳಗೆ ಸುರಿದಿದೊ ?

---

# ನಾಟ್ಯೋತ್ಸವ

ಲೋರೆನ್ಸೊ ಇಲ್ ಮನ್ನೀಫಿಕೊ
ಹಾಡನರ್ಪಿಸಿಹೆನು ತಕೊ.!
ಇಂದಿನೆಮ್ಮ ಉತ್ಸವದಲಿ
ಯೌವನದೀ ಸಂಭ್ರಮದಲಿ
ಹರಯವಿದರ ಯಾಗದಲ್ಲಿ
ಜೀವಿತಗಳ ಭೋಗದಲ್ಲಿ
ಗುರುವೆ ನಿನಗೆ ಅಗ್ರಪೀಠ
ಕಲಿತೆವಿಂದು ನಿನ್ನ ಪಾಠ !
ತೇಲಿ ಬರುವ ಬಾಸ್ ಗಾನ
ನಮ್ಮ ಕುಣಿತಕಲ್ಲವೇನ !
ಅದೊ ದ್ರಾಕ್ಷೆರಸದ ಪಾನ–
ನಮ್ಮ ಕುಡಿತಕಲ್ಲವೇನ !
ವೆನೇಶ್ಯಿಯದ ಕಡೆದ ಗಾಜು
ಸಾರ್ಡೀನಿಯದ ಸುರೆಯ ಮೋಜು
ಮುತ್ತಿರುವರೆ ಕತ್ತಲು ;
ಹಾಡಿನೊಡನೆ ಮೂಡಿ ಬರುವ
ಬೇರೆ ನಾಡ ಕನಸ ತರುವ
ಸೌರಭದಲಿ ಎತ್ತಲು ;
ಯೌವನವನು ಸೂಸುತಿರುವ
ಬಯಕೆಯನ್ನು ಬೀಸುತಿರುವ
ಸುಂದರಿಯರು ಸುತ್ತಲು !
ಯಾರೆ ನೀನು ? ನಾನು ಸ್ಪಾನ್ಯ
ಅದು ಇತಾಲ್ಯ ಇದು ಜರ್ಮಾನ್ಯ.

ಯಾರೆ ನೀನು ? ನಾನು ಫ್ರಾಂಚ.
ಮತ್ತೆ ನೀನೊ ? ನಾನು ಗ್ರೇಚ.
ಮಿಂಚುತಿರುವ ರೇಶ್ಮೆಯಲ್ಲಿ
ಅರ್ಧ ಮುಚ್ಚಿ ಅರ್ಧ ಬಿಚ್ಚಿ
ಜಘನ ಧ್ವಜವ ಗಗನದಲ್ಲಿ
ವಿಜಯದಾಸೆಯಿಂದ ಚುಚ್ಚಿ
ಗಂಡಿಗಾಗಿ ಕಾದುತಿರುವ
ಹಿಂಡು ಎದುರಿದೆ !
ಕಾಯದಲ್ಲಿ ಕದನದಿಚ್ಛೆ
ಆದರದನು ಕೊಂಚ ಮುಚ್ಚೆ
ಅರಳುತಿರುವ ಮರುಳು ನಗೆ
ಸಾವಿರ ಸಿಗರೇಟ ಹೊಗೆ ;
ಮಧುವಿನಲ್ಲಿ ಮಿಂದ ಮುದವು
ಮನಸ ಕೆದರಿದೆ !
ಹಾಡಿನೊಂದು ತೆರೆಯ ಮೇಲೆ
ನರ್ತನಗಳ ತೆಪ್ಪ ತೇಲೆ
ಧೀವರಿಯರು ಬಲೆಯ ಬೀಸಿ
ಮತ್ಸ್ಯಕಾಗಿ ಕಾಯ್ದರೆ,
ಮಿಂಗಳಿವೂ ಗುಣಿಸಿ ಗುಣಿಸಿ
ಅವಳನೆಣಿಸಿ ಇವಳ ಕುಣಿಸಿ
ಮುಗುಳುನಗುತ ಮೆಲ್ಲನೀಸಿ
ಬಲೆಯ ಹಾಯ್ದರೆ !
ಜೀವನಕ್ಕೆ ಎರಡು ಮುಖ—
ಒಂದು ಸುಖ ಒಂದು ದುಃಖ ;
ನಾಳಿನರಿವು ಯಾಕೆ ಸಖಾ ?
ಇಂದಿಗಿಹುದು ತುಂಬ ಸುಖ !
ನೋಡು ಗಾನವೇರುತಿಹುದು !
ದೀಪವೆಲ್ಲ ಆರುತಿಹುದು !

ಕುರುಡು ನೀಲ ಬೆಳಕಿನಲ್ಲಿ
ಕೊಳ್ಳೊ ಅವಳ ಬಾಹುಗಳಲಿ.
ಒಟ್ಟಿನಲ್ಲಿ ಗುಟ್ಟನಾಡೆ
ಮೊಗವನಿರಿಸೆ ಹೆಗಲ ಕೊಡು.
ಬಳ್ಳಿಗೊಂದು ಬಲವ ನೀಡೆ
ಕಟಿಗೆ ಕೈಯ ಇಂಬನಿಡು.
ತಾಳದೊಡನೆ ಮೇಳವಿಸುವ
ಎರಡು ಮಧುರ ನುಡಿಯಲಿ
ಜೀವನಗಳ ಜೀವರಸವ
ಅಧರಕಧರ ಕುಡಿಯಲಿ !
ಮುತ್ತಿರುವರೆ ಕತ್ತಲು
ಸೌರಭವಿದೆ ಎತ್ತಲು
ಸುಂದರಿಯರು ಸುತ್ತಲು !
ಒಂದು ರಾತ್ರಿ ಒಮ್ಮೆ ಸೊಕ್ಕಿ
ಶಾಸ್ತ್ರಗಳನ ದೂಡ್ಯೇನ !
ಇಂದು ರಾತ್ರಿ ಬಂದಹಾಗೆ
ನನ್ನ ಬಾಳ ಮಾಡ್ಯೇನ !
ಪೃಥಿವಿಯಿದರ ಮಡಿಲನೊಕ್ಕಿ
ಸಾರವನ್ನ ನೋಡೇನ !
ಮಿಂಚಿನೊಡನೆ ಮಿಂಚುತೊಮ್ಮೆ
ಕತ್ತಲೆಯನೆ ಕೂಡ್ಯೇನ !

# ನೆರಳಿಗೆ

೧

ಮರದ ಛಾಯೆ ಲತೆಯ ನೆರಳು ಸುಖದ ಬೀಡದು!
ಎದೆಗೆ ಮನಕೆ ತಂಪತಳಿವ ಶಾಂತಿ ನಾಡದು !
ನೆಳಲ ತಂಪ ಬಯಸಿ ಬಂದ
ಪಥಿಕಗೆಂದು ಕರುಣೆಯಿಂದ
ಬಿಸಿಲ ತಡೆದ ಮರದ ಮಂದ ಮುದ್ದು ನೆರಳನು
ಮನದಿ ನೆನೆದು ಹರಸದಿರುವ ಮನುಜನಾವನು ?

೨

ವನದ ರಾಣಿ ಜಲದ ದೇವಿ ನೆಳಲ ಸಖಿಯರು !
ಗಿರಿಯ ತಟದಿ ಬಯಲ ಬುಡದಿ ಸತತ ಮೆರೆವರು !
ಒಟ್ಟುಕೂಡಿ ಆಡಿ ಕಲೆತು
ಕುಂದುಕೊರತೆಗಳನು ಮರೆತು
ಸೊಂಪುಸವಿಗಳೊಡನೆ ಬೆರೆತು ಸೊಬಗ ಸುರಿವರು
ಪ್ರೇಮದಿಂದಲೊಡಲಗೆಳತಿಗೊಡವೆ ತೊಡುವರು.

೩

ಕಂಡುದನ್ನು ನಂಬಿ ನಂಬಿ ಘಾಸಿಯಾದೆವು
ಆಸೆನುಡಿಯ ಕೇಳಿ ಕೇಳಿ ಮೋಸಹೋದೆವು.
ಸಿರಿಯ ಸುಗ್ಗಿ ಪಿಡಿದುಕೊಂಡು
ಮೆರೆವ ತನಕ ಬಳಗ ದಂಡು ;
ಸೊದ್ದು ಮುಗಿಯೆ ಹಕ್ಕಿ ಹಿಂಡು ತೆರದಿ ಹಾರುತ
ಪಳಿವರೆಮ್ಮ ಮತ್ತೆ ಮೊದಲ ಮಮತೆ ಮರೆಯುತ.

೪

ಮಾಗಿ ಬರಲು ಕೋಗಿಲೆಗಳ ಕೊರಳು ಬಿಗಿವುದು
ಗಾನವೆಲ್ಲ ನಿಂತುಹೋಗಿ ಮೌನ ಹಿಡಿವುದು
ತರುಗಳೆಲ್ಲ ಶಿರವ ಬಾಗಿ
ತೊರೆಗಳೆಲ್ಲ ನೀರ ನೀಗಿ
ದೇಶದಲ್ಲಿ ಬತ್ತಿಹೋಗಿ ರೂಪಗೆಡುವುದು
ಭುವಿಯು ಬೇಸಗೆಯಲಿ ದುಃಖದುಡಿಗೆ ತೊಡುವುದು.

೫

ನೆಳಲು ಮಾತ್ರ ನಿಚ್ಚದಂತೆ ರಮ್ಯವಾಗಿದೆ !
ಬಿಸಿಲ ಕಠಿಣ ತಾಪ ತಡೆದು ತಂಪು ಕೊಡುತಿದೆ !
ಕಲ್ಪ ಕಲ್ಪ ಉರುಳಿ ಬರಲಿ
ವಿವಿಧ ವಿಧದ ಭೇದವಿರಲಿ
ಪರರಿಗಾಗಿ ನಿಷ್ಠೆಯಲ್ಲಿ ನಿಂತ ನೆರಳನು
ಮನದಿ ನೆನೆದು ಹರಸದಿರುವ ಮನುಜನಾವನು ?

---

# ಆಟಿಯ ಹುಣ್ಣಿಮೆ

( ಒಂದು ಹಾಡು )

೧

ನಸುಕನು ಎತ್ತಿ ಬೆಳಕನು ಬಿತ್ತಿ
ಬಂದನು ರವಿ ಅರುಣಾಚಲ ಹತ್ತಿ
ಉದಯದ ಗೀತ ಸುರಸಂಗೀತ
ಸೀಳುತ ಬರುವುದು ಸುರಭಿಯ ವಾತ
ಎಲರಿನ ಸೊಂಪು ಅಲರಿನ ಕಂಪು
ಹರಿಸುತಲಿರುವುದು ಕಂಗಳ ಜೊಂಪು
ಮುಗುಳುಗಳಧರವನು— ದಿನಪನು
ಚುಂಬಿಸಿ ಚದರುವನು !

೨

ಎಳೆಬಿಸಿಲನ್ನು ನೆಲಜಲವನ್ನು
ತಬ್ಬುತ ಲೋಕವ ಬೆಳಗುವುದಿನ್ನು
ಪಯಿರಿನ ತೆನೆಯು ಕಂಪಿನ ಮೊನೆಯು
ಮಂಗಳದುಷೆ ರಮಣಿಯ ಮನೆಯು
ದುಂಬಿಯ ದಂಡು ಹಕ್ಕಿಯ ಹಿಂಡು
ಹಾರುತಲಿರುವುದು ಗಿಳಿವಿಂಡು.
ಎಳೆಬಿಸಿಲಾಡುತಿದೆ— ಈಗಲೆ
ಕತ್ತಲೆಯೋಡುತಿದೆ !

೩

ಹಾಸನು ಬಿಟ್ಟು ಕುಂಕುಮವಿಟ್ಟು
ಬಾರೇ ಸೊಬಗಿನ ಸೀರೆಯನುಟ್ಟು.
ಹೂಗಳನಾಯ್ದು ತಳಿರನು ಕೊಯ್ದು
ಮರಳುವ ಪೂಜೆಗೆ ಮಾಲೆಯ ನೆಯ್ದು
ನೀನೈತಾರೆ ಮೋಹದ ನೀರೆ
ಆಟಿಯ ಹುಣ್ಣಿಮೆಯಾಟಕೆ ಬಾರೆ
ಬೆಳಕದು ಏರುತಿದೆ—ಮೂಡಲು
ಕೆಂಪನು ಕಾರುತಿದೆ !

೪

ಏನೀ ಹೆಜ್ಜೆ ಏತಕೆ ಲಜ್ಜೆ
ಎಲ್ಲಿ ಕಲಿತೆ ವೈಯಾರದ ಬಿಜ್ಜೆ
ಆಟಿಯ ಮುಗಿಲು ಮಳೆಯಲಿ ಮಿಗಿಲು
ನೋಡದೊ ನಭದಲಿ ಸಿಡಿಲಿನ ದಿಗಿಲು
ಬಿಲ್ಲಿನ ಬಣ್ಣ ಕಟ್ಟಿದೆ ಕಣ್ಣ
ಬಾರೇ ಬಿಲ್ಲದು ಮುರಿಯುವ ಮುನ್ನ
ಕತ್ತಲೆ ಕೂಡಲಿದೆ—ರಯ್ಯನೆ
ಗಾಳಿಯು ತೀಡಲಿದೆ.

೫

ಏನನು ಮರೆತೆ ಸಿಂಗರದೊರತೆ !
ನಿನಗಿರುವುದೆ ನಗನಟ್ಟಿನ ಕೊರತೆ ?
ಕೊರಳಿನ ಸುತ್ತ ಹನಿಗಳ ಮುತ್ತ
ಪೋಣಿಸಿ ಕಟ್ಟುವೆ ನೀ ಬಾರಿತ್ತ
ತಳಿರಿನ ಬಳೆಯ ಕಮಲದ ಕಳೆಯ
ತೊಡಿಸುತ ಕೊಯ್ಯುವೆ ಸೊಬಗಿನ ಬೆಳೆಯ
ಗಗನವು ಮಳೆಸೂಸೆ—ನಿನಗಿದೆ
ಪನಿ ಕುಳಿರಿನ ಸೇಸೆ

೬

ವಾಸೂ ಶರದೂ ನಮ್ಮನು ಕರೆದು
ಬರದಿರೆ ಸಾರಿಹರೆಲ್ಲರ ತೊರೆದು
ಸೀನೂ ಸರಸೀ ನಮ್ಮನು ಅರಸಿ
ಸಿಗದಿರೆ ಹೊರಟರು ದಾರಿಯ ಮರೆಸಿ
ಹೊಲವನು ಸಾರಿ ಮನವನು ತೂರಿ
ತುಂಬಲು ಬುಟ್ಟಿಯ ಬೆಟ್ಟವನೇರಿ
ಹೂಗಳ ಹುಡುಕುವರು— ಗೆಳೆಯರು
ಹುಡುಕುತ ದುಡುಕುವರು !

೭

ಆಟಿಯ ಹೂವು ಶೋಣದ ಹೂವು
ಕೆರೆಗಳ ದಡದಲಿ ಬೆಳೆದಿಹವು
ಅರಳಿನ ಹೂವು ಹುರುಳಿಯ ಹೂವು
ಅಂಗಳದೆಡೆಯಲಿ ಅರಳಿಹವು
ವಧುವಿನ ಹೂವು ಅದುರಿನ ಹೂವು
ವನದಲಿ ಸೊಬಗನು ತಳೆದಿಹವು
ವಿಧವಿಧ ತಳಿರಿಹವು—ಹೊಸ್ತಿಲ
ಹೊದಿಸಲು ಸೊಬಗಿನವು !

೮

ಹುಣ್ಣಿಮೆಸೊಂಪು ಹೂಗಳ ಕಂಪು
ಆಟಿಕೊಡಂಜಿಯ ಪದಗಳ ಇಂಪು
ಮಳೆಗಳ ಒಲವು ಬೆಳೆಗಳ ಚೆಲುವು
ಹರಿದೋಡುವ ಕೆರೆತೊರೆಗಳ ನಲವು
ಮುಗಿಲಿನ ಕಪ್ಪು ಬಿಸಿಲಿನ ಬೆಪ್ಪು
ಚೆಲುವಿನ ತೌಳವ ತಿಂಗಳಿಗೊಪ್ಪು
ತುಳುವರ ಹಬ್ಬವಿದು—ಹುಣ್ಣಿಮೆ
ಹಬ್ಬದ ಕಬ್ಬವಿದು !

---

# ಸ್ವಾತಂತ್ರ್ಯ ಭೈರವ

೧

ಬೆಂಕಿಬೆಟ್ಟದ ಸಿಡಿಲ ಭೀಷಣ ಸ್ವನವು
ಕಾರುತಿಹ ಕರ್ಬೊಗೆಯ ಕಾಕುಗಳ ರವವು
ಹೊಯ್ಯೆಂದು ಹೊಡೆಯುತಿಹ ಕಡಲ ಗರ್ಜನೆಯು
ನೂರುಗಜವೇರುತಿಹ ತೆರೆಯ ತರ್ಜನೆಯು
ದಿಗ್ವಧುವಿನೊಡಗೂಡಿ ಏರುತಿದೆ ನಭಕೆ
ಭೀಷಣದ ಬಿರುಗಾಳಿ ತಂಬಟೆಯ ಕರೆಗೆ.

೨

ಒಂದು ಮುಗಿಲಿನ ಮಿಂಚು ಹೊಮ್ಮಿ ಹೊಳೆಯುತಿರೆ
ನೂರು ಯೋಜನದಗಲ ಬೆಳಗುತಿಹುದು ತಿರೆ
ಅರೆನಿಮಿಷವೀಧರೆಯ ರುದ್ರಕಂಪನಕೆ
ಕೋಟಿ ಮನೆಗಳು ಸಿಡಿದು ಉರುಳುವವು ನೆಲಕೆ
ತುಮುಲ ನಿರ್ಘೋಷಮಿದು ಬಾನ್ಗೇರುತಿಹುದು
ಪ್ರಕೃತಿಯೋ ಪುಚ್ಛಳಿದು ತತ್ತರಿಸುತಿಹುದು.

೩

ಸಿಡಿಲ ರಭಸವ ಮಿಗಿಸುತಿಹುದು ನಿನ್ನೋಟ
ಸಾಗರದ ವೀಚಿಗಳ ಮಿಗಿಲು ನಿನ್ನಾಟ
ಮಿಂಚುವೆಣ್ಣಿನ ಕಡೆಯ ಕಣ್ಣ ಕೊನೆ ದಿಟ್ಟಿ
ಹೋಲಲಪ್ಪುದೆ ನಿನ್ನ ಉರಿಗಣ್ಣ ದೃಷ್ಟಿ
ಕಿಡಿಯ ಕಾರುವ ಜ್ವಲತ್ಪರ್ವತದ ಬೆಳಕು
ನಿನ್ನ ಬೆಳಕುಗಳೆದುರು ಕೃತ್ರಿಮದ ಥಳಕು.

೪

ನಿನ್ನ ಗುಡುಗಿನ ನಡೆಗೆ ಧರೆಯು ಬಿರಿಯುವುದು
ನಿನ್ನ ತಂಬಟೆ ಸರಕೆ ದಾಸ್ಯ ಹರಿಯುವುದು
ನಿನ್ನ ಮುನಿಸಿಗೆ ಸಗ್ಗ ಸಿಡಿದು ಬೀಳುವುದು
ನಿನ್ನ ಉರಿಗಣ್ಣೋಟ ತಮವ ಸೀಳುವುದು
ನಿನ್ನ ಶಸ್ತ್ರದ ರವಕೆ ದೌಷ್ಟ್ಯ ಬೆದರಿಹುದು
ನಿನ್ನ ವಿಜಯದ ನಾದ ಕೆಚ್ಚ ಕೆದರಿಹುದು.

೫

ಸ್ವಾತಂತ್ರ್ಯಭೈರವನೆ ನಿನ್ನಮರ ಕರೆಗೆ
ಮಾಂತ್ರಿಕರ ಮತವು ತಲೆವಾಗುವುದು ಕೆಳಗೆ
ಮಂತ್ರಾಸ್ತ್ರಸಂಚಯದ ಟಂಕೃತಿಯು ನಾದ
ಮುಳುಗಿಪುದು ಭೇದಗಳ ವಾದಗಳ ನಿನದ
ಕಾಲದೇಶಗಳನ್ನು ಮೂದಲಿಸಿ ಮರೆತು
ಜಯಘೋಷ ಹಬ್ಬುವುದು ದೆಸೆದೆಸೆಗೆ ಬೆರೆತು.

೬

ಹುಟ್ಟೂರ ಬಿಟ್ಟು ಇಳೆಸುತ್ತುವೊಡೆ ನಡೆದೆ
ಸುತ್ತಿದೆಡೆಯಲಿ ಪಾದಪೂಜೆಯನು ಪಡೆದೆ
ಯವನನಿಗೆ ರೋಮಕಗೆ ಪಡುದೀವಿಯವಗೆ
ವಿಪ್ಲವದ ಮಂತ್ರವನು ಬೋಧಿಸುತ ಕಡೆಗೆ
ಹಿಂಸೆಯಲಿ ನೊಂದಿರುವ ಭಾರತದ ಬಳಿಗೆ
ಬರಲಿಹೆಯ ಭೈರವನೆ! ಇನ್ನೆಷ್ಟು ಗಳಿಗೆ?

೭

ಸಾರ್ವಭೌಮತ್ವದುಬ್ಬಟೆಯ ರಿಪುವೆ
ಸ್ವಾಧೀನ ಜೀವನದ ವೈರಿಗಳ ತರಿದೆ.
ಬುಕ್ಕಹರಿಹರರಾಯರಕ್ಕರೆಯ ಗುರುವೆ
ಧರ್ಮನೀತಿಗಳೆರಡ ಕಾಪಿಡುತಲಿರುವೆ
ಹಸುಳೆ ಹೆಂಗಳೆಯರಿಗೆ ಪ್ರಲಯಫಲವಿತ್ತೆ
ಗುಂಡುಬಡಿಗೆಯನೆದುರಿಸುವ ಬಲವನಿತ್ತೆ.

೮

ನಿನ್ನ ಶುಭಪೂಜೆಯಲ್ಲೇನು ಸಂಭ್ರಮವು !
ಶಾಕಿನಿಯ ಡಾಕಿನಿಯ ವಿಲಯ ನರ್ತನವು !
ಉರಿಮದ್ದು ಸಿಡಿಗುಂಡು ಸುರಿಮಳೆಯ ಘೋಷ !
ನೆತ್ತರಲಿ ಮೈತೊಳೆದ ಮೃತ್ಯುವಿನ ವೇಷ !
ಬಾಳ ಮೋಹವ ಬಿಟ್ಟು ಸಗ್ಗದೆಡೆ ಹೋದ
ವೀರಾಳುಗಳ ಅಟ್ಟಹಾಸದಾಮೋದ !

೯

ನಿನ್ನ ಪೂಜೆಗೆ ಹಣ್ಣು ಕಾಯ ತಂದಿಹೆವು
ಅಟ್ಟೆಗಳ ತಟ್ಟೆಯಲಿ ಹಿಡಿದು ನಿಂದಿಹೆವು
ಈ ತನುವ ನಿನ್ನಡಿಯೊಳಿಂದೆ ನೀಡುವೆವು
ಶೋಣಿತದ ಕಣ್ಣೀರ ಸುರಿಸಿ ಬೇಡುವೆವು
ಬಂಧನದ ಬಲೆಹರಿವ ಆಯುಧವ ತಾರ
ದಾಸ್ಯಬೇಡಿಯ ಮುರಿವ ಭೈರವನೆ ಬಾರ !

---

# ಲಕ್ಕಣ

ತೌಳವವಿಭವದ ವಸನವನುಟ್ಟು
ಬಿಂಕದಿ ನಿಂತಿದೆ ಬಾರ್ಕೂರು
ಭೂಪತಿ ಪಾಂಡ್ಯದಿಗಂಬರ ಜೈನರ
ಮಾತೆಯು ವಿಜಯದ ತವರೂರು
ನಾಡಿಗರೊಲುಮೆಯ ಸೊಗದೂರು
ಕಲಿಗಳಲಿ
ಕಲೆಗಳಲಿ
ಕಾಂತಿಯ ಕಲಶವು ಬಾರ್ಕೂರು
ಶಿಲ್ಪದ ಹುಟ್ಟೂರು.

ಕಲಕಲ ನಾದದಿ ನಲಿಯುವ ಸೀತೆಯ
ದಡದೆಡೆ ಜಿನ ಚೈತ್ಯಾಲಯವು
ಕಲ್ಲಲಿ ಕಾವ್ಯವ ಕೆತ್ತಿರುವಂತಿಹ
ನೆತ್ತಿಯನೆತ್ತಿಹ ಮಂಟಪವು
ಬಸದಿಗಳಿಂದ್ರರ ಗುರುಮಠವು
ಸ್ತಂಭಗಳು
ಬಿಂಬಗಳು
ಕಣ್ಣಿಗೆ ಶಿಲ್ಪದ ಹಬ್ಬಗಳು
ಕಲ್ಲಿನ ಕಬ್ಬಗಳು.

ಸೀತೆಯ ಶೀತಳ ವಾರಿಯ ನಾಟ್ಯಕೆ
ಲಕ್ಕಣಕವಿ ತಲೆತೂಗುವನು
ಕಾಡಿನಲಲೆಯುತ ನಾಡಿನಲಾಡುವ

ಗಾಳಿಗೆ ಪುಲಕಿತನಾಗುವನು
ನಾಡಿನ ಸೊಬಗಿಗೆ
ನಲಿಯುವನು
ಒಲಿಯುವನು
ಹಾಡಿನ ಹೃದಯವ ತೆರೆಯುವನು
ತನ್ನನೆ ಮರೆಯುವನು.

ಕದನದಿ ಕಲಿಗಳು ಕಾದಿದ ಬಗೆಯನು
ಲಕ್ಕಣಕವಿ ತಾ ತಿಳಿದಿಹನು
ಶೌರ್ಯವ ತೋರಿದ ತೌಳವ ವೀರರ
ಕತೆಗಳ ಕಬ್ಬದಿ ಬರೆದಿಹನು
ಹೃದಯವನಲಗಿಸಲರಿತಿಹನು
ತುಳುಪದದಿ
ಪಾಡ್ದನದಿ
ಹಾಡಿಹ ನವರಣರೀತಿಯನು
ಸ್ಮಾರಕ ಗೀತೆಯನು.

ಕಬ್ಬಿಗ ಲಕ್ಕಣ ಹಾಡಿದನೆಂದರೆ
ಕಣ್ಣಲಿ ಕುಣಿವುದು ತುಳುನಾಡು
ಬೈರವ ಚೌಟರ ಸಿರಿಸಾವಂತರ
ಆಜಿಲ ಬಂಗರ ಚೆಲುಬೀಡು
ಕಲಿಗಳ ಕದನದ ಸವಿಹಾಡು
ರಣಗೀತೆ
ವೀರಕತೆ
ಮೈನವಿರೇಳುವ ಕಾವ್ಯ
ಕೇಳಲು ಸುಶ್ರಾವ್ಯ.

ನಚ್ಚಿನ ಬೀರರ ರೊಚ್ಚಿನ ಮಾತಿಗೆ
ಪಟುಭಟರಬ್ಬರವೇಳುವುದು
ನೋಡದೊ ಕಣದಲಿ ತೌಳವ ರಟ್ಟರ
ಗೆಲುವಿನ ಜಯದನಿ ಕೇಳುವುದು
ವೈರಿಗಳೆದೆಯನು ಸೀಳುವುದು
ಬಡಿಗೋಲು
ಮೊನೆವಿಲ್ಲು
ಕಾಣುತ ಕೆಚ್ಚದು ಚಿಮ್ಮುವುದು
ಸ್ಫೂರ್ತಿಯು ಹೊಮ್ಮುವುದು.

ರಣದುತ್ಸಾಹವ ಕೈದುಗಳಾಟವ
ಕಾಣದೊ ! ತನು ಬೆರಗಾಗುವುದು
ನುಗ್ಗುವ ಬಂಟರ ಕೇಳಿಯ ಕೇಕೆಗೆ
ಉಕ್ಕಿನ ಮೈಮರುಳಾಗುವುದು
ಕತ್ತಿಯು ಕೈ ಸರಳಾಗುವುದು
ರಿಪುದಳದಿ
ಕೊಳುಗುಳದಿ
ಹಾಹಾಕಾರವದೇಳುವುದು
ಕೂಗದೊ ಕೇಳುವುದು.

ಕಾಲದ ಪರದೆಯು ಮೇಲಕ್ಕೆದ್ದಿತು
ಈಗದು ಹಿಂದಿನ ಚೆಲುಕನಸು
ಶತಮಾನಾಂತ್ಯದಿ ಮರೆತಿಹ ಲೋಕಕೆ
ಗತವೈಭವಗಳ ಸವಿನೆನಸು
ಭಾವನೆಯೂಟಕೆ ಸಿಹಿತಿನಸು
ನಿಜಧರ್ಮ
ಸತ್ಕರ್ಮ

ಮುಳುಗಿಹುದಂದಿನ ಜಲಧಿಯಲಿ
ಕತ್ತಲೆಯಾಳದಲಿ.

ತುಳುವರ ಕೀರ್ತಿಯ ಭೇರಿಯು ಮೊಳಗಿದ
ಬಾರ್ಕೂರೆಂಬುದು ಸುಡುಗಾಡೆ
ಮಮತೆಯಲಾಡಿಸಿ ಭಾಗ್ಯದಿ ಬೆಳಿಸಿದ
ಸೀತೆಯು ಶಿಶುವಿಗೆ ಈ ಪಾಡೆ
ನಾಡಿನ ಸೋಲಿಗೆ ಇದು ಬೀಡೆ
ಈಗತಿಯ
ಅವನತಿಯ
ಕಾಣುತ ಕವಿಗಳು ಕೊರಗುವರು
ಕಲಿಗಳು ಮರಗುವರು.

ಕಾಲದ ಕಡಲಿನ ತೆರೆಗಳ ಹೊಡೆತಕೆ
ಬಳಲುತ ಮುಳುಗಿದೆ ಬಾರ್ಕೂರು
ಕೂಗಿನ ತಾಸಕೆ ಕುಣಿಯುವ ಅಳಿವಿನ
ಕಾಲಡಿ ಬಿದ್ದಿದೆ ಈಯೂರು
ನಾಶವು ನಗುತಿಹ ಹಾಳೂರು
ಬಾಳಿನಲಿ
ಬೀಳಿನಲಿ
ಇದು ತುಳು ನಾಡಿನ ಹಂಪೆ
ಈಗಿದು ಕೊಳೆ ಕೊಂಪೆ.

ಮೌನದ ತೆರೆಯಲಿ ತೇಲುತ ಬಂದಿದೆ
ನಾಡಿಗೆ ಲಕ್ಕಣನನುರಕ್ತಿ
ಭೀಷಣವಾಂತಿಹ ವಿಲಯದ ಚಿತ್ರದಿ

ಮನವನು ಸೆಳೆಯುವದಾ ವ್ಯಕ್ತಿ
ಕವಿಗಳಿಗಿರುವುದೆ ಈ ಶಕ್ತಿ
ನೇಹದಲಿ
ಮೋಹದಲಿ
ಜಗವನು ಜಯಿಸುವ ಬಾಹುಬಲ
ವಿಜಯದ ಅತುಳಛಲ.

ಲಕ್ಷಣ ಕಟ್ಟಿದ ಪಾಡ್ಡನವೆಲ್ಲವು
ಜನತೆಯ ಹೃದಯವ ತೋರುವವು
ಕಾಲಾಘಾತದಿ ಲೋಕವು ಮರೆತಿಹ
ನಾಡಿನ ನಡೆಯನು ಸಾರುವವು
ಚರಿತೆಯ ಮೆಟ್ಟಲನೇರುವವು
ತನಿರಸವ
ಸುರಿಸಿರುವ
ಕವಿಗಮರತ್ವವನಿತ್ತಿಹವು
ಭಕ್ತಿಯ ಬಿತ್ತಿಹವು.

---

# ಉಲ್ಕೆ

೧

ಶೂನ್ಯದ ಭೀಮ ಗಭೀರತೆಯಿಂ
ಕಾಲದ ಕಾಳ ವಿಶಾಲತೆಯಿಂ
ಮೌನದ ಮಹ ದಿಙ್ಮಂಡಲದಿಂ
ಮಾಯಾರಮಣಿಯ ಮಡಿಲೆಡೆಯಿಂ
ಮೋದದಲೆತ್ತಿ
ರೂಪವ ಕೆತ್ತಿ
ಅಸುವನು ಬಿತ್ತಿ
ಎಸೆದಿಹನಾ ಧಿಮ್ಮಿಕ್ಕುವ ಮುನ್ನ
ಕಾಣದ ಮಾರ್ಗದಿ ಹರನೆನ್ನ.

೨

ಮುಳುಮುಳುಗಿದೆ ಮುಳುಗಿದೆ ಕೆಳಗೆ
ಪಳವರಿಯದ ಬಾಂದಳದೊಳಗೆ
ಪಥ ಪಥದಲಿ ಕತ್ತಲೆ ಚೆಲ್ಲಿ
ಬರಿ ಬತ್ತಲೆ ನಿಂತಿರುವಲ್ಲಿ
ಅರಿಯದ ಕಡೆಗೆ
ಅತೀತದೆಡೆಗೆ
ವಿಶ್ವದ ತಡಿಗೆ
ನೆಗೆದೋಡುತ ಗಗನವನೊಡೆದೆ
ಉಡುಮಂಡಲದೆಡೆಯಲಿ ಸಿಡಿದೆ.

೩

ಶತಸಾವಿರ ಸೂರ್ಯರ ಹಾರಿ
ಗುರಿಯರಿಯದ ಪಥದಲಿ ಜಾರಿ

ಚಿರನೂತನವರಸುತ ನಡೆವೆ
ಮರಿಮಿಂಚಿನ ರೆಂಕೆಯ ಪಡೆವೆ
ಶರಧಿಗಳಿಂಗಿ
ಕಾಲವೆ ತಂಗಿ
ಗಗನವುಳುಂಗಿ
ಕಾಲನ ಕೋಲವಿದಾದರು ನಗುವೆ
ತಂಗಲು ತಾಣವದಿರುವೆಡೆ ನೆಗೆವೆ.

೪

ಉರಿಬೆಂಕಿಯ ಬಸಿರಲಿ ಹುಟ್ಟಿ
ಪರಮೇಶನೆ ಉಸಿರನು ಇಟ್ಟು
ಗ್ರಹ ತಾರಗೆ ಮಿಂಚಲಿ ಹೊಸೆದ
ನೆಲೆಯರಿಯದ ಬಲೆಯಲಿ ಎಸೆದ
ಭೀಕರ ಗಾನ
ಗಗನ ವಿತಾನ
ಸ್ವಪ್ನದ ಯಾನ
ಚರಅಚರಂತರದಿಳಿದೆ
ಸಿಟ್ಟಿಯ ಗುಟ್ಟನು ತಿಳಿದೆ.

೫

ಬರಸಿಡಿಲಿನ ಸುಡಿಗಳನುಂಡೆ
ತಟಿದಂಗನೆ ಕುಣಿವುದ ಕಂಡೆ
ಮಳೆಮಾರಿಯ ಬೇರನು ಅರಿತೆ
ಇವೆ ತಾಂಡವಲೀಲೆಗಳೊರತೆ
ಕನಸಿಗೆ ಸಾಗದ
ನೆನಸಿಗೆ ಬಾಗದ
ಮನಸಿಗೆ ಹೋಗದ

ಚೆಲುವಿದೆ ದಿಕ್ತಟದಾಟಿ
ಹರನಾಟಕೆ ಎಲ್ಲಿದೆ ಸಾಟಿ.

೬

ದಿಙ್ಮಂಡಲವಾರಿಧಿಯಲ್ಲಿ
ತೆರೆಸೂರೆಗಳ ನೀಲಿಮೆಯಲ್ಲಿ
ಕೆಂಗೆಂಡದ ಕಾವಲಿಯೊಳಗೆ
ಶತಸಾಸಿರ ಗ್ರಹಗಳು ತೊಳಗೆ
ಹೊಗೆಯುವು ಕೆಲವು
ಧಗೆಯುವು ಹಲವು
ಬಗೆಬಗೆ ಚೆಲುವು
ಕುಣಿವವು ಯಾರದೊ ಕರೆಗೆ
ಮಣಿವವು ಆರುವವರೆಗೆ.

೭

ಕಾರ್ಗತ್ತಲೆ ಕಾರಿವೆ ಹಲವು
ಮೂಲೋಕವ ಬೆಳಗಿವೆ ಕೆಲವು
ಜಡ ಮುಸುಕಿನ ಒಳಗಡೆ ಹೊತು
ಉರಿದಾರಿವೆ ನಭದಲಿ ಜೋತು
ಹಾರಿದೆ ಜ್ವಾಲೆ
ಮಿಂಚಿನ ಮಾಲೆ
ಕಿಡಿಯುಯ್ಯಾಲೆ
ರುದ್ರಮನೋಹರ ನೋಟ
ಪವನ ಪವಮಾನದ ಆಟ.

೮

ಶತಸಾಸಿರ ಅಬ್ಜಗಳಿಂತ
ಅಂಜರಿಯದ ಗಾವುದದಂತ
ತಳತಳಿಸಿದೆ ರವಿ ಶಶಿ ಕೆಲದಿ
ಮುಳುಗೇಳುವ ಮುಗಿಲಿನ ತಳದಿ

ಗಗನದ ಜಾಣೆ
ವಿಶ್ವದ ವಾಣಿ
ಪೃಥಿವೀ ರಾಣಿ
ಚೆಲುವನು ಚೆಲ್ಲುವ ಚಿಲುಮೆ
ಚಿಲುಮೆಯಲುದಿಸಿತು ನಲುಮೆ.

೯

ಹಗಲಿರುಳುಗಳುರುಳುವ ಅಂದ
ಋತುಚಕ್ರವು ತಿರುಗುವ ಚಂದ
ಅಣುಅಣುಗಳ ಚೇತನದಿಂಪು
ನೆಲಜಲಗಳ ಗಾನದ ಲಂಪು
ದೃಶ್ಯವೊ ದಿವ್ಯ
ಸೊಬಗದು ಭವ್ಯ
ಇಲ್ಲಿದೆ ನವ್ಯ
ಕ್ಷಣಕ್ಷಣಕೊಂದಿದೆ ಚಿತ್ರ
ವಿಧ ವಿಧ ದೃಶ್ಯ ವಿಚಿತ್ರ !

೧೦

ಸರಸಾಟದ ಕನಸಿನ ಛಾಯೆ
ಒಡಲಾಸೆಗೆ ರೂಪವನೀಯೆ
ಕಿಡಿಯಾರಿತು ಉಡುಗಿತು ಶಕ್ತಿ
ನೆರೆಯಾಯಿತು ವಿರಸ ವಿರಕ್ತಿ
ನೆನೆದುದರೊಳಗೆ
ಉರುಳಿದೆ ಕೆಳಗೆ
ಮಾಯಕದಿಳೆಗೆ
ತಿನಲಾರದ ತಿನಿಸಿಗೆ ನಿಲುಕಿ
ಶಿಲೆಯಾದೆನು ನೆರೆಯಲಿ ಸಿಲುಕಿ

---

# ನಳಂದ

ದಾರಿಗನೆ ! ಆ ದ್ವಾರವನು ಹಾಯ್ದೊಡೊಳಗೆ
ಒಂದು ಹೆಜ್ಜೆಗೆ ಅಗ್ನಿಚಕ್ರವಿದೆ ! ಇಲ್ಲಿ
ಅವ್ಯಕ್ತತೇಜಸಗಳಾವರ್ತದಲ್ಲಿ
ಒಂದು ಸಂಸ್ಕೃತಿಯೊನ್ಮೆ ಬೆಳೆದಿಳಿಯಿತಿಳೆಗೆ !
ಹಿಂದಕಿದು ಸಾಧಕರ ತವರು. ಪರನಾಡ
ಪಂಬದರ ಭೀಭತ್ಸಗಗ್ಗರಾನೇವು
ಅಬ್ಬರದಿ ನಡೆಯೆ, ಕುಸಿದು ವಿದ್ಯಾಧಾವು
ಇಂದು ನಂದಾದೀಪ ನಂದಿಹುದು ನೋಡ !
ಭಗ್ನಪ್ರಾಕಾರಗಳ ಹುತ್ತವಿದು. ಸುಪ್ತ
ವೈಭವದ ಕಾವಲಿಗೆ ದಾರಿದ್ರ್ಯಸರ್ಪ !
ಇಲ್ಲಿ— ಗುಪ್ತ ಚಿತೆಯಲಿ ನೆನಪುಗಳ ತಪ್ತ
ಭಸ್ಮ ! ಇದು ಉರಿದೊಂದು ಜನಪದದ ದರ್ಪ !
ಓ ಪಥಿಕ ! ಧಗಿಸುತಿದೆ ಈ ಯಜ್ಞಕುಂಡ !
ಯಾವ ನೀರಿಗು ಆರದಿದೆಯಿದರ ಕೆಂಡ ! !

---

# ವಿಮಾನ

ಇಂದಿನುದಯದರ್ಪಣದಲಿ ನನ್ನ ಹರಯ ಬಿಂಬಿಸಿದೊ !
ನಭದ ಶುಭ್ರನೀಲಿಮೆಯನು ಯೌವನವಿದೊ ಚುಂಬಿಸಿದೊ !
ಗಗನ ಗರ್ಭದಲ್ಲಿ ಬಾಳ ಹೊಸವಸಂತ ತುಂಬಿಹುದೊ !
ದೆಸೆಯ ಬಸಿರನೊಡೆದು ದೂರದಾಸೆಯಂತೆ ಬೀಸುತ
ಹೊನ್ನಕಿರಣಗಳಲಿ ತನ್ನ ಬೆಳ್ಳಿಮೈಯ್ಯ ಮೀಸುತ
ಅಗೊ ! ವಿಮಾನವಿಳಿಯುತಿಹುದು ಬಾಳ ಕಡಲನೀಸುತ
ಪಕ್ಷಿರಾಜನಂತೆ ನಭವ ಸುತ್ತಿ ಸುಳಿಯುವಾ ಪರಿ !
ಮೇಘದೆದುರು ಸೋಗೆನವಿಲು ಬಿಡಿಸಿ ಬೀಸಣಿಗೆಗರಿ
ನೃತ್ಯವೆಸಗುವಂತೆ ಬಾಂದಳದಲಿ ನಾಟ್ಯವೈಖರಿ !
ಮಧುರ ಮೋಡಿ ಹೊರಗೆ ! ಜಠರದೊಳಗೆ ಕಿಚ್ಚು ಸಿಡಿಯುತಿದೆ !
ಹಲವುನೂರು ಹಯದ ಶಕ್ತಿ ಕಾಯದಲ್ಲಿ ಮಿಡಿಯುತಿದೆ !
ಅನತಿದೂರದೊಂದು ಗುಡುಗು ಗುಂಡಿಗೆಯಲಿ ಬಡಿಯುತಿದೆ !
ನನ್ನ ಆಶೆ ಆಶಯಗಳು ರೂಪುಗೊಂಡು ಹಾರಲಿ !
ಪೌರುಷದಲಿ ಬಾನನೊಂದೆ ಉಸಿರಿನಲ್ಲಿ ಹೀರಲಿ !
ಆ ವಿಮಾನದಾತ್ಮದೊಡನೆ ಮೇಲೆ ಮೇಲೆ ಏರಲಿ !
ಶೃಂಖಲೆಗಳ ಬಂಧನದಲಿ ತನುವು ಮಾತ್ರ ತೆರೆಯಲಿದೆ.
ಯಂತ್ರಕಾರನಿವನ ಮನಸೊ ? ಬಾನಕದವ ತೆರೆಯಲಿದೆ;
ಸಾಧನೆಯುತ್ಸಾಹದಲ್ಲಿ ಸಾಹಸದಲಿ ಕರೆಯುತಿದೆ !

# ಧೀವರ

ಬೇರೆ ನೀರ್ಗಳಲೆನ್ನ ಆಶಯದ ಬಲೆಯು
ಬೀಸಹೊರಟಿಹೆನೀಗ. ಉತ್ಸಾಹದೋಡ-
ಮಾನಸದ ಓಟದಲಿ ಈಸೆ ಹಿರಿಯಲೆಯು,
ವೇಗದಂಜಿಕೆ. ನಭದಲಿದೆ ಮತ್ತೆ ಗಜ ಮೋಡ !
ಎಳೆತನದ ಮರುಳಿನಲಿ ಯೌವನದ ಭೋಗ-
ಭಾಗ್ಯದೈಸಿರಿಯ ರತ್ನವಿಷ್ಟರದಲ್ಲಿ
ಕುಳ್ಳಿರಿಸೆನೆಂದೆ ! ಇದಕೊ ಯೌವನಮಿಲ್ಲಿ !
ಮಣಿಯಲ್ಲ, ಮೀನನರಸುತೆ ಹೊರಟೆನೀಗ !
ಆಗಸವ ಮುಟ್ಟ ವಾಂಛಿತವಿಲ್ಲ. ಜಗಲಿ
ಯೊಂದಿಗೆ ಬದಲು; ಅದರ ಮೆಟ್ಟಲನು ಏರಿ
ಮೀನಿನಂಗಡಿಯಿಡುವೆ. ಬರಲಿ ಹಾಯ್ ತೂರಿ
ಎನ್ನ ಧ್ಯೇಯದ ಗಾಳಿ ! ಕೂವೆ ನೇರ್ನಿಲಲಿ !
ಇಲ್ಲ ರತ್ನಾಕರದ ಮಣಿಯಾಸೆ ಪ್ರಭುವೆ
ನಾಲ್ಕು ಬಣ್ಣದ ಮೀನು ಬಲೆಯಲಿರೆ, ವಿಭುವೆ !

---

# ಮಾಯಕದ ಮಸಣ

ನರರ ಜೀವಿತನದಿಗಳಲೆಯುತ
ಮಸಣಶರಧಿಯ ಹೊಗುವವು
ಜಗದ ವಿಭವಗಳೆಲ್ಲ ಭೀಕರ
ತೆರೆಯ ಹೊಡೆತಕೆ ಸಿಗುವವು
ಹರಿವ ಹೊಳೆಗಳು ತೊಡುತೊರೆಗಳು
ಚಿಗಿದು ಚಿಮ್ಮುತ ಬರುವವು
ದೀನಧನಿಕನ ಭೇದವೆಣಿಸದೆ
ಸಾವಸಮತೆಯ ತರುವವು !
ಲೋಕವೆಂಬುದು ನಾಕಕೇರುವ
ಕಠಿನತರ ಕಿರುದಾರಿಯು
ಸಾರಿಹೋಗಲು ಕಠಿನವಾದರು
ದಾರಿತಪ್ಪದ ಕೇರಿಯು.
ಬುವಿಯ ಮಾರ್ಗದಿ ನರನ ಜೀವಿತ
ನಿಲ್ಲಲಾಗದ ಓಟವು
ಓಡುತೋಡುತ ಮತ್ತೆ ಮಸಣದಿ
ಅಂತ್ಯವಾಗುವ ಆಟವು !
ಚೆಲುವ ಕೆಂದುಟಿ ಸೊಗದ ಕೃಶಕಟಿ
ನುಡಿದ ನುಡಿಗಳ ಮಧುರತೆ
ನಡೆಯ ಸಡಗರ ಬೆಡಗನುಣ್ಣೊಗ
ಹಾಡುಕೊರಳಿನ ಮಧುರತೆ
ಕಣ್ಣನೋಟವು ಕುರುಳಿನಾಟವು
ಬಣ್ಣವೇರುವ ಮೋರೆಯು
ಮಸಣದೇಣಿಯ ಮೆಲ್ಲನೇರಲು
ಕಣ್ಣಕುಕ್ಕುವ ಕೋರೆಯು !

ಕಾಮಕಾಂಚನ ಬಯಕೆ ಮಸಣವು
ತೆಗೆದು ತೋರುವ ಆಸೆಯು
ಸಗ್ಗಕೇರುವ ಬಿಡದೆ ಮಸಣಕೆ
ಜಗ್ಗಿ, ಕಟ್ಟುವ ಪಾಶವು.
ನರನ ಓಟದಿ ನರಕವೆಂಬುದು
ಮಸಣವೊಡ್ಡಿಹ ಜಾಲವು
ಹೆಜ್ಜೆತಪ್ಪುತ ಬಲೆಗೆ ಬೀಳಲು
ಲೋಭಮೋಹವೆ ಮೂಲವು !
ಭವದ ಜೀವನ ನದಿಯ ದಾಟಲು
ಕಡವಿನಂತಿದೆ ಮಸಣವು
ಕಡವ ದಾಟುತ ದಡವ ಸೇರಲು
ದೋಣಿಯಾಗಿದೆ ದಾನವು
ಸತ್ಯ, ಸಾಧನ, ಶ್ರದ್ಧೆಪಾತಿಗ
ಕೇಳಿಕೊಳ್ಳುವ ಸುಂಕವು
ಮಣ್ಣುಹೊನ್ನಿನ ತುಚ್ಛತಳಕಿನ-
ಲೇಕೆ ಲೋಕಕೆ ಬಿಂಕವು ?
ಕೋಟಿಕೊತ್ತಲ ಮಂದಿಮಾರ್ಬಲ
ಬೀರಬಂಟರ ತೋಳ್ಬಲ
ನೂರು ಜೋದರ ಎದುರು ಜಗ್ಗದೆ
ಕಾದಿ ಬೀಳುವ ಆ ಛಲ !
ಶೌರ್ಯಸಾಹಸ ನಿಶಿತ ಕೂರಸಿ
ಸಾವಿನೆದುರಿಗೆ ನಿಷ್ಫಲ !
ಮಸಣದಾಳಿನ ಕರೆಯ ಕೂಗಿಗೆ
ಎದುರು ನಿಂತರೆ ಏಂ ಫಲ ?
ನೂರುವರುಷದ ದ್ವಾರಿಯಾಚೆಯು
ಮಸಣ ಸಂತೆಗೆ ಪಯಣವು !
ಪಯಣದಂತ್ಯಕೆ ಶೋಕ-ಸಂಶಯ
ಶರದಮಂಚದಿ ಶಯನವು !

ಬೇನೆ ಬೇಗುದಿ ಜಿನಸು ಕೊಳ್ಳಲು
ಸಾವಿನಂಗಡಿ ಸುಲಭವು !
ಕೊಂಡ ಜಿನಸನು ಹಿಂದೆ ದೂಡಲು
ಕೊಳ್ಳುವವರಾರಿಲ್ಲವು !
ಮಸಣವೆಂಬುದು ದಾರಿತೋರದ
ಮಾಯದರಮನೆಯಾಗಿದೆ !
ಯಾತ್ರೆಗೆದ್ದಿಹ ಜನರು ತಂಗುವ
ಧರ್ಮಛತ್ರದ ಹಾಗಿದೆ !
ಮಡಿದ ಮಾನವಕುಲವು ಕೂಡುವ
ಸಭೆಯ ಮಂಟಪವಾಗಿದೆ
ಲೋಕದಿಂದಲಿ ನಾಕನರಕಕೆ
ಸಂಕತೂಗಿದ ಹಾಗಿದೆ.

---

# ಜವರಾಯ

೧

ಕಣ್ಣನು ಕುಕ್ಕುವ ಕಾರಿರುಳೊಳಗೆ
ನೋಡಲು ತೀರದ ಬೆಳಕಿನ ಒಳಗೆ
ಸೊಬಗಿನ ಸುಗ್ಗಿಯ ಅಂಬರದೊಳಗೆ
ಗಭೀರ ಗರ್ಜನೆ ಶರಧಿಯ ಒಳಗೆ
ಸಂಪಗೆ ಸೊಂಪಿನಲಿ
ಪಾದರಿ ಪೆಂಪಿನಲಿ
ಕೇದಗೆ ಕೆಂಪಿನಲಿ
ನೀನಿಹೆ ನಲಿಯುತಲಿ.

೨

ಕೋಮಲ ಕಾಯುವ ಕೊಳ್ಳುವೆ ನೀನು
ಕಬ್ಬದ ಹೆಣ್ಣನು ತಬ್ಬುವೆ ನೀನು
ಮನಸಿನ ಕನಸಿನ ಒಳಗಿಹೆ ನೀನು
ಲೋಕದ ಲಯವನು ಸಾಧಿಪೆ ನೀನು
ಸದ್ದಿಲ್ಲದೆ ಬಂದು
ತಲೆ ಬಳಿಯಲಿ ನಿಂದು
ಜಡಜೀವಿಯ ಕೊಂದು
ಹಾರುವೆ ನೀ ಸಂದು.

೩

ಕಾಣದ ಲೋಕಕೆ ಹಾರಲು ಕಲಿಸಿ
ಹೊತ್ತೇ ಹೋಗದ ಊರಿಗೆ ಕರೆಸಿ

ಇರುಳೇ ಬಾರದ ನಾಡಿಗೆ ನಡೆಸಿ
ಕರ್ಮದ ಹಣ್ಣನು ತಿನ್ನಲು ತಿಳಿಸಿ
ಮೆರೆಯುವ ಜವರಾಯ
ಕದನದಲಿ ಅಜೇಯ
ಜೀವಿಗಳ ಜೀಯ
ದಕ್ಷಿಣದ ಒಡೆಯ.

೪

ಅರಿಗಳ ಮಧ್ಯದಿ ನೆಲಸಿಹೆ ನೀನು
ಗೆಣೆಯರ ನಡುವೆಯೆ ನಿಂತಿಹೆ ನೀನು
ಬನದಲಿ ಮನೆಯಲಿ ಎಲ್ಲಿಯು ನೀನು
ಪೃಥಿವಿಯ ಸಕಲ ಕಡೆಯಲಿ ನೀನು
ಜೀವಗಳ ಹೀರುವೆ
ನೃತ್ಯವಂ ಮಾಡುವೆ
ವೈಭವದಿ ಓಡುವೆ
ಮಾಯೆಯೊಡನಾಡುವೆ.

---

# ಭರವಸೆ

ಕಾರ್ಮುಗಿಲು ತಾಳಿದ್ದ ಕೋಲ್ಮಳೆಯ ರಾತ್ರಿಯೂ
ತಳಿರ ಪೀಠದಿ ಕುಳಿತು ದನಿಯೆತ್ತಿ ನಿಶೆಗೆ
ಸಾಮದಿಂ ಹಾಡುತಿಹ ಕೋಗಿಲೆಯ ಕಲರವವು
ಜೀವಜೀವಂಗಳಿಗೆ ಭರವಸೆಯ ಒಸಗೆ

ಕಷ್ಟಗಳನನುಭವಿಸಿ ಮನವೆಂಬ ಕಂದರವು
ತಮದಿಂದ ತುಂಬಿಹುದು. ಅದನೊಮ್ಮೆ ನೀಗೆ
ಮುಗಿಲ ಮಧ್ಯದಿ ಇಣಿಕಿ ಕಣ್ಮುಚ್ಚಿ ಕಣ್ತೆರೆವ
ಬಾನಮೀನೊಂದಿಹುದು ಭರವಸೆಯ ಕೊಡಲು.
ದುರ್ದೈವವಾರಿಧಿಯ ಗುಪ್ತಗಮನಕೆ ಸಿಲುಕಿ
ತೇಲಲರಿಯದೆ ಕುಂದಿ ನೊಂದ ನರಗೆ
ಒಂದು ಕೂರ್ಮೆಯ ಮಾತೆ ಭರವಸೆಯ ಕೊಡುತಿಹುದು
ಎಳೆಪೈರನೆಬ್ಬಿಸುವ ಮಳೆನೀರಿನಂತೆ.

---

# ಮೌನ

೧

ಮೌನದರ್ಥವ ನೀನು
ಹೊರಗೆಳೆಯಬಲ್ಲೆಯಾ ?
ಮೌನದಲಿ ಅಡಗಿದ್ದ
ಗೂಢವರಿತಿಹೆಯಾ ?

೨

ಬಾಯಿತೆರೆದೊಡೆ ನೂರು
ಪಕ್ಕಿಗಳು ಹೊರಗೆ
ಹಾರುವವು. ಅವು ನಿನ್ನ
ಮಾತುಗಳ ಒಸಗೆ.

೩

ಹಕ್ಕಿಹಿಂಡಿಲಿ ರಾಜ-
ಪಕ್ಷಿಯನು ಕಾಣೆ
ಕಷ್ಟವದೆ ನೋಡದುವೆ
ಅತಿಮಾತ ಬವಣೆ.

೪

ಮೌನಮಳೆವಿಲ್ಲ ಸೀ
ಮಾತ ಮುಗಿಲಿಂದ
ಮುಚ್ಚುತಿಹೆ. ನೋಡಣ್ಣ
ಹೋಯ್ತಲ್ಲ ಅಂದ.

೫

ಮೌನದಾ ಗಬ್ಬದಲಿ
ಅಡಗಿರುವ ಭಾವ
ಅಮಲವಾಗಿಹುದದುವೆ
ಬಲ್ಲವರ ಜೀವ.

೬

ಮೌನತೆಯ ಮುಸುಕಿನಲಿ
ಮರೆಯಾದ ಮಾತೆ
ಜ್ಞಾನದಿಂ ತುಂಬಿಹುದು
ಮತ್ತೇಕೆ ಕಂತೆ ?

---

# ತೃಪ್ತಿ

ಆಶಿಸಿದ ಪದವನ್ನು ಅಡರಲಾರೆ
ಸಿರಿವೆಣ್ಣೆ ! ನೀನೆನಗೆ ಒಲಿಯಲಾರೆ
ಅದಕಾಗಿ ನಾನೀಗ ಮರುಗುತಿಲ್ಲ.
ಎನ್ನ ಹಣೆಯಲಿ ಅದನು ಬೊಮ್ಮ ಬರೆದಿಲ್ಲ.

ಕಡಲಾಚೆ ಮೆರೆಯುತಿಹ ಊರುಗಳನು
ಕಾಂಬ ಋಣವೆನಗಿಲ್ಲ. ಆದರೇನು ?
ಕಾಲೂರ ಕಾಸಾರಗಳಲಿ ಬೆಳೆವ
ಬೆಳ್ದಾವರೆಗಳನು ಕಾಂಬೆನನುದಿನವು.

ಧನಿಕರಂತೆನಗಿಲ್ಲ ಸೊಂಪ ಗಂಧ
ಅದನಾಶಿಸೆನು ನಾನು. ಎನಗೆ ಚಂದ
ಬಿರಿದ ಮುಗುಳಿನ ಕಂಪು. ಅದಕೆ ಎಣೆಯು
ಶ್ರೀಗಂಧಚಂದನದ ಅತ್ತರಿನ ಸಿರಿಯು !

ಗಾಯಕನು ನಾನಲ್ಲ; ಹಾಡ ತಿಳಿಯೆ
ಕೊಳಲನ್ನು ವೀಣೆಯನು ನುಡಿಸಲರಿಯೆ
ಆದೊಡೇನೆನಗಿಹುದು ತುಂಬಿಡು
ಅದುವೆ ಎನ್ನೆದೆ ತಣಿಪ ನಿಜಶಾಂತಿ ಹಾಡು.

ಮಾಜನರ ಒಡನಾಡಿ ತಿರುಗಲೆನಗೆ
ಆಸೆ ಇಲ್ಲವು ಎನಗೆ. ವನಗಳೊಳಗೆ
ನಿನ್ನ ಸನ್ನಿಧಿಯಲ್ಲಿ ತಿರುಗೆ ತೃಪ್ತಿ
ದೇವ ! ದರುಶನವಿತ್ತೊಡದುವೆ ಸಂತೃಪ್ತಿ.

---

# ಕಮ್ಮಾರ

ನೀನಾರು ಕಮ್ಮಾರ ? ಮೌನಿಯಾಗೇಕಿರುವೆ
ಕುದಿಯುತಿಹ ಕುಲುಮೆಯಲಿ ಏನ ಕಾಸುತಿಹೆ ?
ಕಾದಿರುವ ಕಬ್ಬಿಣವ ಅಡಿಗಲ್ಲಮೇಲಿಟ್ಟು
ಸುತ್ತಿಗೆಯ ಹೊಡೆತದಿಂದೇನ ಮಾಡುತಿಹೆ ?
" ಧನಿಯಂತೆ ತಲೆ ಎತ್ತಲಸುವಾದ ದಾಸನನು
ಬಂಧಿಸಲು ಶೃಂಖಲೆಯ ಮಾಡತೊಡಗಿಹೆನು. "

* * * *

ಕುಲಿಮೆಯಲಿ ಈಗೇನ ಕಾಸುತಿಹೆ ಕಮ್ಮಾರ
ನಿನ್ನ ಚಮ್ಮಟಿದನಿಯು ಕೇಳುತಿದೆ ದೂರ
ಚಿಲುಮೆಯಗ್ನಿಯ ಪ್ರಭೆಯು ಕಣ್ಣ ಕುಕ್ಕಿಸುತಿಹುದು
ಮೊದಲ ಸಂಕಲೆಗಿಂತ ಈಗಿನದು ಭಾರ !
" ಬಡತನದ ಸೋದರಗೆ ಆಳ್ತನದ ಬೇಡಿಯನು
ತೊಡಿಸಿರುವ ಯಜಮಾನಗಿದ ಮಾಡುತಿಹೆನು. "

---

# ನೊರೆ

ದಾರಿಯನು ತೋರಯ್ಯ ಭಾರಿ ಕತ್ತಲೆಯಲ್ಲಿ
ಕರೆಯಲಾರೆನು ನಾನು ಇನ್ನಾರನೂ
ನಿನ್ನ ಧ್ಯಾನವ ಮಾಡಿ ನಿನ್ನ ಗಾನವ ಪಾಡಿ
ನಿನಗೆ ಎನ್ನಾತ್ಮವನು ಅರ್ಪಿಸಿಹೆನು
ಕವಿದ ಕತ್ತಲೆಯಲ್ಲಿ ಪಥದ ಸುಳಿವನು ಕಾಣೆ
ಎಲ್ಲೆಲ್ಲಿ ತುಂಬಿಹುದು ಅಂಧಕಾರ !
ದಾರಿಗಗೆ ದಾರಿಯನು ತೋರ್ಪ ಧಾತನು ನೀನು
ನೀನಲ್ಲವೇ ಜಗದ ಸೂತ್ರಧಾರ ?
ಗವರಿ ಗರ್ಜಿಸುತಿರುವ ಅಂಧಕಾರಕೆ ಬೆದರಿ
ನಿನ್ನ ನಾಂ ಕಾಯುತಿಹೆ ನಿರುತ ಹರಿಯೇ
ದಿವ್ಯ ಜ್ಞಾನದ ಸೊಡರ ಕಾದು ಕುಳಿತಿಹ ಎನಗೆ
ಒಲಿದು ದಯೆಯನು ತೋರದಿಹುದು ಸರಿಯೇ ?
ನೀರಡುತ ಕಣ್ಣಿನಲಿ ನಡುಗುತ್ತ ಒಡಲಿನಲಿ
ಕುಳಿತಿದ್ದೆ ಕಾಯುತ್ತ ದೀಪಕೆಂದು
ಆಗೆನಗೆ ಕೇಳಿಸಿತು ನಿನ್ನ ಮುರಲಿಯ ನಾದ
ಮರೆಯಲಾರೆನು ಅದನು ಕರುಣಸಿಂಧು
ಮುರಲಿವ್ಯೈಮೆಯದೆನಿತೊ ! ಗಾನದಿಂಪದು ಎನಿತೊ !
ತಾಪಸರು ತೊಳಲುವರು ನಿನ್ನ ದನಿಗೆ !
ಕೊಳಲ ಗಾನವ ಕೇಳಿ ಕಾರುಗತ್ತಲೆಯಲ್ಲಿ
ತಿಳಿವುದೀವಿಗೆ ಕಂಡೆ ತನುವಿನೊಳಗೆ !
ಹೇ ನನ್ನ ಭಯಹಾರಿ, ಅಂಧಕಾರವ ಹೀರಿ
ದಾರಿಯನು ತೋರಿದೆಯ ಬೆಳಕಬೀರಿ !

ಭಕುತಿಭಾವಗಳೆಲ್ಲ ನಿರುತ ನಿಂತಿರುವಂತೆ
ಅಭಯವಚನವನೀಯೊ ಕರುಣಲಹರಿ
ನಿನ್ನ ಕೊಳಲಿನ ಗಾನ ಎನ್ನ ಪ್ರೇಮದ ಪಾನ
ಇನ್ನೊಮ್ಮೆ ನುಡಿಸಯ್ಯ ಗಾನಝರಿಯೆ
ಮೌನದಿಂ ಮಲಗಿರುವ ಆತ್ಮವನು ಎಚ್ಚರಿಸೆ
ಒಡಲ ವೀಣೆಯ ಮಿಡಿಯಬಾರೊ ಹರಿಯೆ

---

# ಹಂಬಲಿನ ಹಾಡು

ಹಾಡುತಿಹೆವು ಪಾಡುತಿಹೆವು
ದೇವ ! ನಿನ್ನ ಮಹಿಮೆ ಕಂಡು
ತೋಷದಿಂದ ಉಬ್ಬಿ ಉಬ್ಬಿ ಹಾಡುತಿರುವೆವು—
ಬಾಳಿ ಬದುಕಿ ಬಳಿಕ ಬಳಲಿ
ಬೀಳಲಿರುವ ಕೋಟಿನಾವು
ನಿನ್ನ ಲೀಲೆರಸವ ಸವಿದು ನಲಿಯುತಿರುವೆವು—

ರವಿಯು ತನ್ನ ರಶ್ಮಿಯಿಂದ
ಶಶಿಯು ಶೀತ ಕಿರಣದಿಂದ
ಕವಿಗಳೆಲ್ಲ ಕಬ್ಬದಿಂದ ನಿನ್ನ ನುತಿಪರು—
ಶರಧಿ ತನ್ನ ತೆರೆಗಳಿಂದ
ಸಿಡಿಲುಮಿಂಚು ಘೋಷದಿಂದ
ಭೂಮಿದೇವಿ ಸಹನೆಯಿಂದ ಒಲುಮೆಪಡೆವರು—

ಸಾವು ನೋವ ಮೌನದಿಂದ
ಸಹಿಸ ಬಲ್ಲ ಸಹನಶೂರ
ಅಚಲಶಿಲಾತರುಗಳೆಲ್ಲ ಭಕುತಿಬಲ್ಲವು—
ಜಗದ ಜೀವರಾಸಿ ಪಿತಗೆ
ದೀನತೆಯಲಿ ಕರೆಯ ಕಳುಹಿ
ಮೌನಗೀತ ಪಾಡಿ ಪರಮ ಮುಕುತಿ ಪಡೆದವು —

ಬಡವರೆಲ್ಲ ತಮ್ಮ ಹಿರಿಯ
ಹಾಡ ನಿನಗೆ, ದೇವ, ಕಳುಹಿ
ಪಡೆದು ನಿನ್ನ ಒಲುಮೆಯನ್ನು ಧನ್ಯರಾದರು—

ಸೇನೆಗಳು ಸೇರಿ ತನುವ
ಸ್ವಾಮಿಸೇವೆಯಲ್ಲಿ ಸವೆದ
ಧೀರಯೋಧರೆಲ್ಲ ಮಹಾಧನ್ಯರು—

ಭಕ್ತಿಭಾವ ಗೀತೆ ರಚಿಸಿ
ಕವಿಯು ಕಬ್ಬಗಳಲಿ ನಿನ್ನ
ಪಾದಪೂಜೆ ಮಾಡಿ ತಾನು ನಡೆವ ಮುಂದಕೆ—
ಶಬರಿ ಕೊಟ್ಟ ಹಣ್ಣಿನಂತೆ
ಭಕ್ತಿಯಿಂದ ನಿನ್ನ ನಮಿಸಿ
ಧನ್ಯನಾಗಿ ಮೆರೆವ ಬದಲು ಜಂಭವೇತಕೆ ?

ಕಿರಿಯ ಬಾಲರಳುವ ದನಿಯು
ತರುಣಜನರ ಸುಖದ ನಗುವು
ಹಿರಿಯ ಕಣ್ಣ ಪಿರಿಯ ಪನಿಯು ನಿನ್ನ ಗೀತೆಯು—
ಭವದ ರಂಗಭೂಮಿಯಲ್ಲಿ
ವಿವಿಧ ವೇಷ ಧರಿಸಿ ನಾವು
ಅಳುತ ನಗುತಲಿರುವ ನಟನೆ ನಿನಗೆ ಪ್ರೀತಿಯು—

ಕಣ್ಣ ತಣಿಪ ಶೈಲ ಗಣವು
ಬನವು ಹೊಲವು ಗಿರಿಯು ತೊರೆಯು
ಅನಿಲ ಅನಲರೆಲ್ಲ ನಿನ್ನ ನೋಡಿ ಗಣ್ಯರು—
ಖಗವು ಮಿಗವು ಕೀಟಕೋಟಿ
ವಿವಿಧ ವಸ್ತು ನಿಕರವೆಲ್ಲ
ದೇವಿ ದೇವರೆಲ್ಲ ನಿನ್ನ ಪಾಡಿ ಧನ್ಯರು.—

ನಿನ್ನ ಪದವ ಸೇರಲೆಳಸಿ
ಭಕ್ತಿಭಾವದಿಂದ ಭಜಿಸಿ
ಬೆಳಗು ಬೈಗು ಧ್ಯಾನದಲ್ಲಿ ಕೆಲರು ಇರುವರು.—

ಭುವನರಂಗಸೂತ್ರಧಾರ
ನಿನ್ನ ಪಾದತಲವ ಮರೆತು
ಪಾಪಭರಿತ ಭೋಗಿಜನರು ಹಲರು ಮೆರೆವರು—

ಆದರೇನು ? ಹರಿಯೆ ನೀನು
ಪಾಪಪುಣ್ಯಗಳಿಗೆ ತಕ್ಕ
ಪಡಿಯನಿತ್ತು ನರಕನಾಕ ಕಾಣಲಟ್ಟುವೆ—
ಭಕುತಜನಕೆ ಅಮಿತ ಗುಣನೆ
ಅಭಯವಿತ್ತು ಬೆಳಕ ತೋರಿ
ಪ್ರೇಮಪಾಶದಿಂದಲವರಬಿಗಿದು ಕಟ್ಟುವೆ—

---

# ವಿರಹಿಣಿಯ ಹಾಡು

ಸೊಬಗಿನಿಂದೈತರುವ ನಾಗಕನ್ನಿಕೆಯಂತೆ
ಸಂಜೆ ಛಾಯೆಯು ಜಗವ ಸಾರಿ ಬರುತಿಹುದು
ಕಾತರದಿ ಮೈಮರೆತು ಸಂಜೆ ಮೌನವನೊಡೆದು
ಎನ್ನ ಆತ್ಮವು ನಿನ್ನ ಕರೆಯುತ್ತಲಿಹುದು

ನೂರಾರು ಯೋಜನೆಗಳಂತರದಿ ನೀನಿರುವೆ
ಆದರೂ ನೀನೆನ್ನ ಕಣ್ಣಮುಂದಿರುವೆ
ನಿನ್ನ ನಗುವಿನ ಚಂದ ನಿನ್ನ ಮೋರೆಯ ಅಂದ
ಶಶಿಯ ಸೌಂದರದಲ್ಲಿ ನಾನು ಕಂಡಿರುವೆ

ಪಾಡುತಿಹ ಹಕ್ಕಿಗಳ ಇನಿದನಿಯ ಗೀತಗಳು
ನಿನ್ನ ನಲ್ಮೆಯ ಮಾತು ಎಂದು ಯೋಚಿಸುವೆ !
ಅರಳುತಿಹ ಕುಸುಮಗಳ ಪರಿಮಳವು ನೀನೆನಗೆ
ಕೊಡುತಿರುವ ಉಡುಗರೆಗಳೆಂದು ಭಾವಿಸುವೆ

ಬೆಂದಿರುವ ದೇಹಕ್ಕೆ ತಂಪನ್ನು ಕೊಡುತಿರುವ
ತಂಬೆಲರು ನೀನೆಂದು ನಾನು ನಂಬಿಹೆನು
ಎನ್ನ ಕಾಡುವ ಮುಗಿಲ ಮರೆಯಿಂದ ಇಣುಕುತಿಹ
ಗ್ರಹಚಂದ್ರತಾರಕೆಗಳೆನಗೆ ನೀನು

ವರ್ಷಕಾಲದ ಬರವ ಹಾರೈಪ ಚಾತಕದ
ತೆರದಿ ಕಾಯುತಲಿಹೆನು ಒಲವಿನಲಿ ನೀರ !
ಮುಚ್ಚಂಜೆಯಾಗಸದಿ ಬುವಿಯ ಬೆಳಗಲು ಬರುವ
ಚಂದಿರನ ತೆರದಿ ನೀ ನಲಿದೊಲಿಸು ಬಾರ !

---

# ಕವಿ

( ಗೀತ ಗೋವಿಂದದ ಧಾಟಿ )

ಕವಿಯು ನೋಟಕೆ ಎಣೆಯದೆಲ್ಲಿದೆ ?
ಕವಿಯ ಭಾವಕೆ ಎಲ್ಲೆ ಎಲ್ಲಿದೆ ?

ಬಿರಿದ ಪೂವಿನೊಳ್ ಕವಿಯ ಕಂಡನು
ಜಗದ ಜನಕನ ಸೊಗದ ನಗೆಯನು
ಮಧುವನರಸುತ ತಿರುಗುವಳಿಯನು
ಕಂಡು ಕರ್ಮದಾ ಯೋಗವರಿತನು

ತಳಿರ ಪೀಠದಿ ಕುಳಿತ ಕೋಗಿಲೇ
ಕವಿಯ ಹೃದಯವ ತರಿದೆ ಈಗಲೇ
ಕೇಳಿ ಕೋಗಿಲೇ ನಿನ್ನ ನುಣ್ಚರ
ಕವಿಯು ತಿಳಿದನು ಅಮರರಿಂಚರ

ಮಧುರ ಸರದಲಿ ಹರಿವ ನದಿಯನು
ಕಂಡು ಕಬ್ಬಿಗ ಉಬ್ಬುತಿರುವನು
ನದಿಯ ಸುಸ್ವರ ಗಾನದಲೆಯದು
ಹೃದಯದಡದಲಿ ಹೊಡೆಯುತಿರುವುದು

ಇನನ ಕಿರಣದ ಕನಕಕಾಂತಿಯು
ರಜನಿಕಾಂತನ ರಜತರಾಗವು
ಕವಿಯ ಒಡಲೊಳು ಅಲೆಯನೆಬ್ಬಿಸಿ
ಆಡುತಿರುವವು ಮೈಯ್ಯ ಮರೆಯಿಸಿ

ವರ್ಷಕಾಲದ ಗುಡುಗಸದ್ದನು
ಕೇಳಿ ಕುಣಿಯುವ ಸೊಗದ ನವಿಲನು
ಕಂಡು ಕಬ್ಬಿಗ ನಾಟ್ಯವೆಸಗುವ
ಸಗ್ಗರಮಣಿಗೆ ಹೋಲಿಸಿರುವನು

ರಾಮರಾಜ್ಯದ ಸೊಬಗನುಂಬನು
ತಾಳಿಕೋಟೆಯ ರಣವ ಕಾಂಬನು
ಬಡವರುದರವ ಬಗೆದು ನೋಳ್ಪನು
ಧನಿಕರೆದೆಯನು ಸಿಗಿದು ಬರುವನು

ಹಸುರು ಹುಲ್ಲಿನ ಮೇಲೆ ತೋರುವ
ಜಲದ ಕಣದಲಿ ಕಂಡ ಕಬ್ಬಿಗ
ತೊಳೆದ ಮುತ್ತಿನ ಧವಳ ಕಾಂತಿಯು !
ಕವಿಯ ಕಣ್ಣಿಗೆ ಎಲ್ಲಿ ಎಲ್ಲಿದೆ ?

ಕಣ್ಣು ಮಾಡುತ ಬಾನವಿಾನನು
ವಿಶ್ವವೆಲ್ಲವ ನೋಡಿ ನಗುವನು
ಕೊಳಕು ಕೆಸರೊಳು ಸಗ್ಗ ಸೃಷ್ಟಿಸಿ
ನೋಳ್ಪನದರೊಳು ಪ್ರಭುವ ದೃಷ್ಟಿಸಿ

ಹಾಡಹೊನಲನು ಹರಿಸಿ ದೇವನ
ಪಾದಯುಗಲವ ತೊಳೆದು ಕಬ್ಬಿಗ
ಕವನಕುಸುಮದ ಮಾಲೆಯರ್ಪಿಸಿ
ಇನನ ಆರತಿ ಎತ್ತುತಿರುವನು

ಕವಿಯ ಭಾವವು ಹಕ್ಕಿತೆರದಲಿ
ಹಾರಬಲ್ಲುದು ಬಾನ ತಡಿಯಲಿ
ಬೆಟ್ಟದರಿಯೊಳು ಧುಮುಕಲಳುಕದು
ಕಡಲ ತೆರೆಯಲಿ ತೇಲಲಂಜದು

ಕವಿಯ ರಾಜ್ಯಕೆ ಎಲ್ಲೆ ಎಲ್ಲಿದೆ ?
ಕವಿಯ ನೋಟಕೆ ಎಣೆಯದೆಲ್ಲಿದೆ ?
ಕವಿಯ ಭಾವಕೆ ಅಂತ್ಯವೆಲ್ಲಿದೆ ?
ಕವಿಯ ಸರಸಕೆ ಸಾಟಿ ಎಲ್ಲಿದೆ ?

---

# ತಾಜಮಹಲ್

೧

ಸೊಗದದೇವಿ ರೂಪುಗೊಂಡು ಜಗಕೆ ಬಂದಳೊ !
ಜಗಕೆ ಬಂದು ನಮ್ಮ ನಾಡ ಹುಡುಕಿಕೊಂಡಳೊ !
ಹುಡುಕಿಕೊಂಡು ನಮ್ಮ ಸೇರಿ
ನಾಡಿಗೊಂದು ಪೆಂಪ ಬೀರಿ
ತಿರೆಗೆ ಮಧುರ ಮೊಗವ ತೋರಿ
ಭರತರಾಣಿಗೆ ಯಶ ಕೋರಿ
ಸೊಗವ ದೇವಿ ರೂಪುಗೊಂಡು ಜಗಕೆ ಬಂದಳೊ !
ಜಗಕೆ ಬಂದು ನಮ್ಮ ನಾಡು ಹುಡುಕಿಕೊಂಡಳೊ !

೨

ಧವಲಮೂರ್ತಿ ತಾಜ್ ! ನೀನುನಲ್ಮೆಯುಡುಗರೆ !
ನೇಹಚರಿತೆ ಕೇಳಿ ಜಗಕೆ ನಿನ್ನಲಕ್ಕರೆ !
ಶಹಜಹಾನ ಬಾದಶಹನು
ಮಡಿದ ಮಡದಿ ತಾಜಳನ್ನು
ನೆನೆದು ನಿನ್ನ ಕಟ್ಟಿಸಿಹನು
ಏನು ಧನ್ಯಳಮ್ಮ ನೀನು
ಧವಲಮೂರ್ತಿ ತಾಜ್, ನೀನು ನಲ್ಮೆಯುಡುಗರೆ !
ನೇಹಚರಿತೆ ಕೇಳಿ ಜಗಕೆ ನಿನ್ನಲಕ್ಕರೆ !

೩

ಗಿರಿಯು, ಬಯಲ, ಬನದ ನಡುವೆ ಯಮುನೆ ಹರಿವಳು
ಹರಿದು ನಲಿದು ಪಾಡಿ ನಿನ್ನ ಪಾದ ತೊಳೆವಳು !

ಪ್ರೇಮದಿಂದ ಪಾದತೊಳೆದು
ಜೋಗುಳವನು ಹಾಡಿ ನಲಿದು
ಬಾಹುಗಳಲಿ ಒಮ್ಮೆ ಬಿಗಿದು
ಮುತ್ತನೊಂದ ನಿಟ್ಟು ನೆಗೆದು
ಗಿರಿಯ, ಬಯಲ, ಬನದ ನಡುವೆ ಯಮುನೆ ಹರಿವಳು !
ಹರಿದು ನಲಿದು ಪಾಡಿ ನಿನ್ನ ಪಾದ ತೊಳೆವಳು !

೪

ಸೊಗದದೇವಿ ತಾಜಮಹಲ್ ! ಏನು ಬೆಡಗಿದು !
ಜಗವನೆಲ್ಲ ಮರುಳುಮಾಡಿ ಗೆಲಿದ ಸೊಗಸಿದು !
ಲೋಕ ನಿನ್ನ ಕಾಣಬಂದು
ನಾಕ ಕಂಡ ತೆರದಿ ನಿಂದು
ಮೂಕವಾಯ್ತು ನಿನ್ನ ಮುಂದು
ಕಾಣದಾಯ್ತು ಕಿರಿಯ ಕುಂದು
ಸೊಗದದೇವಿ ತಾಜಮಹಲ್ ! ಏನು ಬೆಡಗಿದು !
ಜಗವನೆಲ್ಲ ಮರುಳು ಮಾಡಿ ಗೆಲಿದ ಸೊಗಸಿದು !

೫

ಚಂದ್ರಕಾಂತ ಶಿಲೆಯಲಿಂತು ಕಾವ್ಯಬರೆದರೆ ?
ಸಾಂದ್ರವಾದ ಕಲ್ಲೊಳಿಂತು ನಿನ್ನ ಕೊರೆದರೆ ?
ವಿಗತವಿಭವ ತೋರುತಿಹೆವು
ನಿನ್ನ ಚೆಲುವ ಸಾರುತಿಹೆವು
ಸಾರಿ ಮುದದಿ ಏರುತಿಹೆವು
ತಲೆಯದೂಗಿ ಕೇಳುತಿಹೆವು
ಚಂದ್ರಕಾಂತಶಿಲೆಯಲಿಂತು ಕಾವ್ಯಬರೆದರೆ ?
ಸಾಂದ್ರವಾದ ಕಲ್ಲೊಳಿಂತು ನಿನ್ನ ಕೊರೆದರೆ ?

---

# ಜನನ-ಮರಣ

ಜೀವನವು ನದಿಯಂತೆ ಗೀತಗಳ ಹಾಡುತ್ತ ನಲಿನಲಿದು ಹರಿಯುತಿಹುದು.
ಬೊಬ್ಬುಳಿಯು ಜಲಮುಖದಿ ತೇಲುತ್ತ ಹೋಗುವದು, ಕೊಳೆಕಸರು
ತಳದಲಿಹುದು.

ಜೀವಿತದ ಸುಖದಿನಗಳಂತೆ ಬುದ್ಬುದವೆಲ್ಲ ಬಲುಬೇಗ ಸಿಡಿಯುತಿಹವು
ನದಿತಳದ ಕೊಳೆಕಸರು ಕಷ್ಟದಿನಗಳ ತೆರದಿ ಮೆಲುಮೆಲನೆ ಚಲಿಸುತಿಹವು.
ಸಾಗರದ ಒಡಲಿನಲಿ ಮರೆಹೊಗಲು ಹೋಗುತಿಹ ಜೀವಿತದ ನದಿಜಲವನು
ಶುದ್ಧವಾಗಿರಿಸಲ್ಕೆ ಯತ್ನವನು ಗೈಯುತ್ತ ಸವೆಯಿಸೈ ತನುಮನವನು.
ತೇಲುತಿಹ ಅಲೆಗಳನು ಭೇದಿಸುತೆ ಮಾನವನ ಪರಿಶುದ್ಧ ಆತ್ಮಜ್ಯೋತಿ
ಜವನ ಹಿಡಿತಕೆ ಬರದೆ–ಜನನ ಮರಣಕೆ ಸಿಗದೆ–ಹಾರುವುದು ಪಡೆದು
ಮುಕುತಿ.

---

# ಪ್ರಕೃತಿಗೆ

೧

ನಿನ್ನ ನೋಡಿ ಎನ್ನಮನವು ಕದಡಿಹೋಗಿದೆ !
ನಿನ್ನ ಶಕುತಿಯರಿತು ಬಗೆಯು ನಯನವರಳಿದೆ !
ನೀನೆ ತಾಯಿ, ನೀನೆ ಗೆಳತಿ
ಒಲುಮೆ ತೋರದೇಕೆ ಕುಳಿತಿ
ದೇವಿ ನಿನ್ನ ತಳ್ಕೆಗಳಲಿ ಎನ್ನ ಕಾಪಿಡು !
ನಿನ್ನ ಕಂದನಲ್ಲೆ ನಾನು, ಒಲಿದು ಮುತ್ತಿಡು !

೨

ಬಾನಿನಲ್ಲಿ ಶಿರವನೆತ್ತಿ ಗಿರಿಯು ನಿಂತಿದೆ !
ಮುಗಿಲಿನೊಡನೆ ಸರಸವಾಡಿ ಸೊಬಗನಾಂತಿದೆ !
ಶೈಲ ಸೊಬಗ ಸಿರಿಯ ನೋಡಿ
ಭಾವರೇಖೆ ಮುದದಿ ಮಾಡಿ
ಆವ ಮನದಿ ಹಾಡಹೊನಲು ಹರಿಯಲಾರದು ?
ಆವ ದಿನದಿ ಮನದ ಮುಗುಳು ಬಿರಿಯಲಾರದು ?

೩

ಸರಸದಲ್ಲಿ ಹರಿಯುತಿರುವ ನದಿಯ ದಡದಲಿ
ಬಾಂಗೆ ಶಿರವನೆತ್ತಿನಿಂತ ಗಿರಿಯ ಬುಡದಲಿ
ಎದ್ದು ಕಾಂಬ ಗುಡಿಸಲಂದ
ಮೋರೆ ತೋರಿ ನಿಂತ ಚಂದ
ಜಗದ ನಗರ ರಚನೆಗಳಲಿ ಕಾಣಲಾಪನೆ ?
ನರನು ಸೊಬಗ ಸೃಷ್ಟಿಮಾಡಿ ತೋರಲಾಪನೆ ?

೪

ಗಗನಮಂಟಪದಲಿ ತೂಗುತಿರುವ ಚಂದಿರ
ರಜನಿಯಲ್ಲಿ ತಮವ ತರಿದು ತಿರೆಗೆ ಸುಂದರ

ಜೊನ್ನದುಡಿಗೆಗಳನು ತೊಡಿಸಿ
ಪೊನ್ನದಲರುಗಳನು ಮುಡಿಸಿ
ಮನಕೆ ಮೋಹಮಾರವೆ ತರುವ ಶಾಂತಿಯೊಡೆಯನು !
ದಿನದಿ ದಣಿದ ತಿರೆಗೆ ಸುಖವಿಶ್ರಾಂತಿ ತರುವನು !

೫

ಕಾಳರಾತ್ರಿಯುದರದಿಂದ ದಿನಪನುದಯಿಸಿ
ಜೀವರಾಶಿಗಳನು ನಿಚ್ಚ ಕಜ್ಜವೆಸಗಿಸಿ
ಭುವನತ್ರಯಕೆ ಜೀವವಿತ್ತು
ಜಗದ ಬೆಜ್ಜರವನು ಕಿತ್ತು
ದೇವಿ ನಿನ್ನ ಬೆಡಗ ಬುವಿಗೆ ಸಾರುತಿರುವನು !
ಬೈಗು ಬರಲು ಕಡಲತಡಿಗೆ ಹಾರುತಿರುವನು !

೬

ಗಾಳಿರಥಕೆ ರವಿಶಶಿಗಳ ಬಿಗಿದು ಕಟ್ಟಿಹೆ !
ಮಿಂಚ ವಾಘೆ ಮಾಡಿ ವಾಜಿಗಳನು ಬಿಟ್ಟಿಹೆ !
ಎಷ್ಟು ಚೆನ್ನ ನಡಿಗೆ !
ಏನು ಸೊಗಸು ಪಚ್ಚೆಯುಡಿಗೆ !
ಸಡಗರದಲಿ ಗುಡುಗು ನಿನ್ನ ಬೆಡಗ ಸಾರ್ವುದು !
ಮೇಘಧ್ವಜವು ಬಾನಿನಲ್ಲಿ ಮುದದಿ ಹಾರ್ವುದು !

೭

ದೇವಿ ನಿನ್ನನಿಂದು ಲೋಕ ಬರಿದೆ ಮರೆತಿದೆ !
ಮೋನವಾಂತು ನಿಂತರೇನು ? ಎನಗೆ ಗುರುತಿದೆ !
ನಿನ್ನ ತಿಳಿದು ನಾನು ನಲಿವೆ
ಕವನವಿದನು ನಿನಗೆ ಬರೆವೆ
ನೀನೆ ಜಗವ ನಡೆಸುತಿರುವ ವಿಶ್ವ ಶಕ್ತಿಯು !
ನೀನೆ ಜಗದ ಕವಿಗಳೆಲ್ಲರಾದಿ ಮಾತೆಯು !

---

# ಸಾವು

ಸಾವು ಸಹಜವು ನಿಜವೆ. ಸಾವಿಲ್ಲದೊಡೆ ಬಾಳು
ನೋವಿನೋಲುಗ. ಜೀವದಾಧಿಕ್ಯ ಗೋಳು.
ಜಸದ ಅಬ್ಬರವಿರದು, ಪರದ ಅಂಜಿಕೆಯಿರದು
ಹೊಸಪರಿಯ ನೈರಾಶ್ಯ ಧರೆಗಿಳಿಯಬಹುದು.

ಸಾವು ನೋವುಗಳೆರಡು ಸಾಜ ಜೀವಕ್ಕೆಂದು
ಯಾವ ಭೂತದ ನೇಮ ನಡೆಯುತಿಹುದಿಂದು ?
ಯಾರ ಹಸಿವಿಂಗಿಸಲು ಯಾರ ಮದ ಭಂಗಿಸಲು
ಕೂರಲಗ ಕತ್ತಿಯಲಿ ನೆತ್ತರಿನ ಭುಗಿಲು ?

ಕಾವ ಕರುಣೆಯು ಸಯುದ ತೋಳ ತೊಂಗಲಿನಲ್ಲಿ
ಜೀವದುಂಬಿಯ ಆಟ. ಕಾವ ಮಾತಿರಲಿ
ಕಾಯಕೊಬ್ಬಿಸಿ ಕೊಲುವ ಕಟುಕರಾಳ್ವಿಕೆಯಲ್ಲಿ
ನೋಯಬಾರದು ಎಂಬ ಮಾತಿಗೆಡೆಯಲ್ಲಿ ?

ಕೊಲೆಯು ಜೀವದ ಕೊನೆಯೆ ! ಬಾಳು ಸಾವಿನ ಆಳಿ !
ಜಗದ ಸೌಂದರ್ಯವಿದಂತಕನ ಸೂಳೆ.

# ಕರ್ತವ್ಯ

ಭೋರಿಡುತ ಬಿರುಗಾಳಿ ಬೀಸುತಿಹುದು
ಗುಡುಗುಮಿಂಚಾರ್ಭಟವು ಕೇಳುತಿಹುದು
ಮಾಳೆಬಂದು ಹೊಳೆಗಳೆಲ್ಲಬ್ಬರಿಸುತಿಹವು
ಮೋಡಗಳ ಮರೆಯಲ್ಲಿ ತಾರಕೆಗಳಿಹವು
ಕಾಡನಡುವಿನ ಕಿರಿದು ಹಾದಿಯಲ್ಲಿ
ಅರೆಬೆಳಕ ಕತ್ತಲೆಯ ಬೀದಿಯಲ್ಲಿ
ಅಲ್ಲಲ್ಲಿ ಕಾಣುವವು ಕಿರಿದಾದ ಬಂಡೆ
ಹೆಣಗಳನು ಹುಗಿದಿದ್ದ ಮಣ್ಣಿನಾ ದಿಂಡೆ
ನಾನಾಗ ಆದಾರಿಯಲಿ ಹೋಗುತಿದ್ದೆ
ಬಂಡೆಗಳ ದಿಂಡೆಗಳ ಎಡವೆಡವಿ ಬಿದ್ದೆ
ಬಿದ್ದವನೆ ಎದ್ದೊಮ್ಮೆ ಮುಂದಿಹುದ ಕಂಡೆ
ಅಸ್ಥಿದೇಹದ ಜನರ ನೋಡಿ ಭಯಗೊಂಡೆ
ಆಗೆನ್ನ ಮನದೊಳಗೆ ಭಯವು ಬಂದು
ಸಾರಿದುದು ಬೇಗ ಹಿಂತಿರುಗು ಎಂದು
ಆಸೆಯೂ ಮುಂಬರಿದು ಹೇಳಿದುದು ಇಂತು
" ಇನ್ನು ನಡೆದರೆ ಮುಂದೆ ಅಳಿಗಾಲ ಬಂತು
ಹಿಂತಿರುಗು ಹಿಂತಿರುಗು ಮನೆಯತ್ತ ಹೋಗು
ಸಿರಿಸುಖಗಳಿಹವಲ್ಲಿ ಈಹುಚ್ಚ ನೀಗು"
ಆದರೆನ್ನಯ ಹೃದಯದಿನ್ನೊಂದು ವ್ಯಕ್ತಿ
ಅದುವೆ ಎನ್ನಲ್ಲಿರುವ ಕರ್ತವ್ಯ ಶಕ್ತಿ
" ನಡೆಮುಂದೆ ನಡೆಮುಂದೆ ಹಿಂತಿರುಗಬೇಡ
ಬಂದ ದಾರಿಯಲೀಗ ನುಗ್ಗಿ ಮುಂದೋಡ
ಈ ದಾರಿ ತೋರುವುದು ಸಗ್ಗದಾನೆಲೆಯ

ಹಿಂತಿರುಗಿ ಹೋಗಬೇಡ ಮಾಯೆಯಾ ಒಲಿಯು
ನೀನಾಗ ನೋಡಿದ್ದ ಅಸ್ಥಿದೇಹಗಳು
ಕರ್ತವ್ಯಪಥದಲ್ಲಿ ಬಿದ್ದ ಜೀವಿಗಳು
ಅಂತಾಗಬೇಡೆಂದು ಹೇಳುವೆನು ನಿನಗೆ
ನಡೆಮುಂದೆ ಕೊಡುಬೇಗ ಆತ್ಮಬಲಿ ನನಗೆ"
ಎಂದ ಮಾತನು ಕೇಳಿ ನುಗ್ಗಿದೆನು ಮುಂದೆ
ಮಂಚದಾ ಕೆಳಬಿದ್ದು ಎಚ್ಚತ್ತು ನಿಂದೆ
ಕನಸಾದರೀಮಾತು ಎನ್ನ ಸ್ಮೃತಿಪಥದಿ
ನೆಲಸಿಹುದು ಶಿಲೆಯಂತೆ ಅಮರಶಾಶ್ವತದಿ
"ಅಂತಾಗಬೇಡೆಂದು
ಹೇಳುವೆನು ನಿನಗೆ
ನಡೆಮುಂದೆ ಕೊಡುಬೇಗ
ಆತ್ಮಬಲಿ ನನಗೆ
ಆತ್ಮಬಲಿ ನನಗೆ
ಆತ್ಮಬಲಿ ನನಗೆ"

---

# ಯಾತ್ರಿಕರು

ಸಗ್ಗದೇವಿಯು ಸಖಿಯೆ ತಾರೆ
ಕಾಂತಿಯವಕುಂಠನದಿ ಮೋರೆ
ಮುಚ್ಚಿಹಾರುತ ಬಾನ ಮೇರೆ
ಎಲ್ಲಿ ಯಾತ್ರೆಗೆ ಹೊರಟಿಹೆ ?

ಬಾಲಶಶಿ ನೀ ನಗುವ ಬೀರಿ
ತಿರೆಯ ತಿಮಿರದಿ ಬೆಳಕದೋರಿ
ನಭದಿ ಮುಗಿಲಿನ ತೇರನೇರಿ
ಎಲ್ಲಿ ಯಾತ್ರೆಗೆ ಹೊರಟಿಹೆ ?

ಧರೆಯನೆಲ್ಲವ ತಿರುಗಿ ತಿರುಗಿ
ಆಳಗೋಳನು ಕಂಡು ಕೊರಗಿ
ದಾರಿ ಕಾಣದೆ ಎಲರೆ ಮರುಗಿ
ಎಲ್ಲಿ ಯಾತ್ರೆಗೆ ಹೊರಟಿಹೆ ?

ತೇಲಿ ಬರುತಿಹ ಕಡಲ ತೆರೆಯೆ
ಪಡಕೆ ಹೊರಳುತಲೇಕೆ ಮೊರೆವೆ
ಮೊರೆದು ಮತ್ತೂ ಮುಂದೆ ಬರುವೆ
ಎಲ್ಲಿ ಯಾತ್ರೆಗೆ ಹೊರಟಿಹೆ ?

ಪೂರ್ವ ಪ್ರತಿಭಾ ರಾಷ್ಟ್ರರಮಣಿ
ಭಾರತದ ಸ್ವಾತಂತ್ರ್ಯತರುಣಿ
ಮರೆತು ಈ ನಿರ್ಭಾಗ್ಯಧರಣಿ
ಎಲ್ಲಿ ಯಾತ್ರೆಗೆ ಹೊರಟಿಹೆ ?

---

# ಬೆಡಗಿ

೧

ಹೂಮಳೆಯು ಹನಿಯುತಿದೆ
ಕೊಳಲೆಲ್ಲ ಕುಣಿಯುತಿದೆ
ತಾವರೆಯು ಮಣಿಯುತಿದೆ
ನೀಲನೆಲವೆರಡೀಗ ಸೊಬಗಾಂತಿದೆ
ಮಘುಮಾಸದ್ಯೆಸಿರಿಯ ತಂದಂತಿದೆ
ಬಳುಕುತ್ತ ಆ ಬೆಡಗಿ ಬಂದಂತಿದೆ

೨

ಕೊಳದಿಳಿದು ಮಿಂದಿಹಳು
ಮಿಂದು ಜಲ ತಂದಿಹಳು
ಕ್ಷಣವಿಲ್ಲಿ ನಿಂದಿಹಳು
ಮಿಂದೊದ್ದೆ ಬಟ್ಟೆಗಳು ಮೈಗಂಟಿವೆ!
ಸಡಿಲಾದ ಕುರುಳುಗಳು ಕಣ್ಗಟ್ಟಿವೆ
ಯೌವನದ ಅಲರುಗಳು ಕಂಪಿಟ್ಟಿವೆ

೩

ಒಡವೆಗಳ ತೊಡಕಿಲ್ಲ
ಸೀರೆಗಳ ಬೆಡಗಿಲ್ಲ
ವೈಯ್ಯಾರದರಿವಿಲ್ಲ
ಕೃತ್ರಿಮದ ಸಿಂಗರವು ಬೆಡಗಿಗಿಲ್ಲ.
ನಕ್ಕು ಕರೆಯುವ ಹುಡುಗಿ ಬೆಡಗಿಯಲ್ಲ
ಸನ್ನೆಗಳ ಮಾಟವನು ಇವಳು ತಿಳಿವಿಲ್ಲ.

೪

ನೇಹದಲಿ ಕುಂದಿಲ್ಲ
ಕಾಪಟ್ಯದರಿವಿಲ್ಲ
ಮೋಹನಾಟಗಳಿಲ್ಲ
ಮಾತುಮನಗಳಲೆರಡುಭಾವವಿಲ್ಲ
ನಕ್ಕನಗೆಯಲಿ ಕೊಂಕಿನರ್ಥವಿಲ್ಲ
ನಟ್ಟ ನೋಟದಿ ಮಿಂಚ ಹೊಡೆತವಿಲ್ಲ.

೫

ಜೀವಿತದ ಸವಿಸೊಬಗು
ಪ್ರೇಮಭಕ್ತಿಯ ಬೆಡಗು
ಭಾವಗಳ ಬಗೆಯ ಬಿಗು
ಕಾಂಚನದ ಕಳಸೆಯಲಿ ಅಳೆಯಲಳವಲ್ಲ
ಮಾಯಕದ ಬಲೆಯಲ್ಲಿ ನಿಜನೇಹವಿಲ್ಲ
ಎಂಬ ತತ್ವವು ಬೆಡಗಿಗರಿಯದಿಲ್ಲ.

೬

ಮನವೆಳೆವ ಮಾಂತ್ರಿಕಳು
ತೇಜಸದ ತೆನೆಯವಳು
ಮಾನದರಮನೆಯವಳು
ಕೊಳದ ತಾವರೆದಳದ ಮರೆಯಲಡಗಿ
ಸೊಬಗ ಪಾವಿತ್ರ್ಯಗಳ ಹೊದಿಕೆಯಲ್ಲುಡುಗಿ
ನಗುವ ಮಂಜಿನ ಹನಿಯು ಹಾಗಿಹಳು ಬೆಡಗಿ

# ಜೀವನ ಸಮರ

೧

ಮಾನವನ ಜನನವೇ ತಿರೆಯತೊಟ್ಟಿಲಲಾಯ್ತು
ಚೆಲುವ ಪ್ರಕೃತಿಯೆ ಜಗದ ಮಾತೆಯಾಯ್ತು
ಬುವಿಯ ಆಂದೋಲನವೆ ತೂಗಾಟವಾಯ್ತು
ಗುಡುಗುಗಾಳಿಯು ಸರವೆ ಜೋಗುಳವದಾಯ್ತು.
ಬಾಂದಳದಿ ತೇಲುತಿಹ ಕಾರ್ಮುಗಿಲ ಧೌತದಲಿ
ತೂಗುತೊಟ್ಟಿಲ ಕೂಸ ಹೊರಹೊದಿಕೆಯಾಯ್ತು
ತೇಜಸದ ಚಂದಿರನ ಚೆಲುಬಿಂಬ ಬಾಲ್ಯದಲಿ
ನಚ್ಚಿನಾಟದ ರನ್ನಗೊಂಬೆಯಂತಾಯ್ತು.
ನಿಸ್ಸೀಮಗರ್ಜನೆಯ ಘೂರ್ಣಿಸುವ ಕಡಲು
ನೀಲಿಯಾಳದಿ ನಿಂತ ನಗರಾಜನೊಡಲು
ಸೆಳೆಮಿಂಚು ಮಳೆಬಿಲ್ಲು ಮೇಘನಿಸ್ವನವು
ಕೆಳೆಯರಾಗಿರುವಾಗ ರಮಿಸದೇ ಮನವು ?

೨

ಜೀವನದ ಸಮರದಲಿ ಕಾದಲನುವಾದೊಡನೆ
ತಿರೆಯ ತೊಟ್ಟಿಲೆ ಸಮರರಂಗವಾಗುವುದು.
ಹೆತ್ತಬ್ಬೆ ಪ್ರಕೃತಿಯೇ ಎದುರಾಳಿಯಾದೊಡನೆ
ಕೆಳೆಯಕೂಟವದೆಲ್ಲ ಭಂಗವಾಗುವುದು.
ಕಡಲ ಹಿರಿದೆರೆ ಹಾರಿ ಹಿಡಿದು ನುಂಗಲು ಮುಂದೆ
ದಡಕೆ ನುಗ್ಗುತಲಿಹುದು ಬಡಿಯುತಿಹುದು.
ಸೊಬಗಿನಾಗರವಾದ ತಿರೆಯೆ ತಿರುಗುತ ಹಿಂದೆ
ಸಮರಪಥದಲಿ ನುಗ್ಗಿ ನಡೆಯುತಿಹುದು.
ಕಾಲಿನಡಿಯಲಿ ನೆಲವು ನಡುಗುತ್ತಲಿಹುದು
ತಲೆಯಮೇಗಡೆ ಬಾನು ಗುಡುಗುತ್ತಲಿಹುದು
ಅತುಳ ಶೀತಳ ಹಿಮವು ಅಳಲಿಸುತಲಿಹುದು
ಬೆಂಬಿಸಿಲು ಬೇಗೆಯಿಂ ಬಳಲಿಸುತಲಿಹುದು.

೩

ಗೆಲುವಿನಭಿಲಾಷೆಯಲಿ ಮಾನವನು ಮುಂದೊತ್ತಿ
ಜಗವನೆಲ್ಲವ ಜಯಿಸಿ ಮರಳಿ ಬಂದಾಯ್ತು
ಜಯಸಿರಿಯು ಬೆಂಬತ್ತಿ ಬೆದರಿಕೆಯು ಹಿಂದೊತ್ತಿ
ಬವರದಲಿ ವಿಜಯವನು ಹಿಡಿದು ತಂದಾಯ್ತು.
ಸೆಣಸಿನಲಿ ಸಾಗರವ ಸೆರೆಹಿಡಿವ ಮಾತಾಯ್ತು
ಕದನದಲಿ ಕಾಡುಗಳ ಕಡಿದಾಡಿಯಾಯ್ತು
ಸಿಡಿಲಿನರಮನೆಯಾದ ನಭವ ಕಂಡುದು ಆಯ್ತು
ಜವನ ಮೀಸೆಯ ಸೆಳೆವ ಸಾಹಸವದಾಯ್ತು
ಕಾಣಹವಣಿಸಿಯಾಯ್ತು ಸತ್ಯದೀಧಿತಿಯು
ತನುವನರ್ಪಿಸಲೇರಿಯಾಯ್ತು ವೇದಿಕೆಯು
ದಿಗ್ವಿಜಯದಾಸೆಯಿಂ ಬಂದಾಯ್ತು ದೂರಂ
ಕಾಣಲಾರದೆ ಇನ್ನು ನವಯುಗದ ಸಾರಂ!

೪

ವಿಶ್ವಜನನಿಯ ಮಡಿಲೊಳಡಗಿ ಕುಳಿತಿಹ ಗಹನ
ತತ್ವಸಂಚಯಕಿಹುದೆ ಹದವು ತುದಿಮೊದಲು?
ಅವ್ಯಕ್ತ ಸತ್ಯಗಳ ಕಾಂಬ ಕಷ್ಟದಿ ಸಹನ-
ಶಕ್ತಿ ತೋರಿದ ನರನ ಧೀರತೆಗೆ ಬದಲು?
ವಿಜ್ಞಾನವಾಙ್ಮಯದ ಪ್ರೋಚ್ಚಂಡತಾಂಡವಕೆ
ಎನಿತು ವೀರರ ಒಡಲು ಆಹುತಿಯದಾಯ್ತೋ!
ಒಂದು ಧರ್ಮದ ಮರ್ಮವನ್ನು ತಿಳಿಯುವ ಬಯಕೆ
ಎಷ್ಟು ಬೇನೆಯನುಂಡು ಸಫಲವಾಯ್ತೋ!
ಇದು ಮಿಥ್ಯವಿದು ಸತ್ಯವೆನ್ನುವುದ ತಿಳಿಯೆ
ಕಾದಿಯಾಯಿತು ಸಾವು ಹುಟ್ಟುಗಳ ಬಳಿಯೆ
ಜೀವನದ ಕೊಳುಗುಳ ಸಮಾಧಿಗಳ ಮೇಲೆ
ಇಂದು ನಡೆಯುತಲಿಹುದು ಈ ವಿಶ್ವಲೀಲೆ!

---

# ಕೇಳಿದ ಕೋಗಿಲೆಗೆ

೧

ನಿನ್ನಿನಿರುಳು ನಿನ್ನ ಗಾನಸೋನೆ ಸುರಿಯಿತು
ಎನ್ನ ಮನವು ಸೊಡೆಯು ಸೋಕಿ ಎಸಳ ತೆರೆಯಿತು
ಮೋಹವೆನಗೆ ಮಾತ್ರವಲ್ಲ
ಜಗದ ಚರಾಚರಗಳೆಲ್ಲ
ಒಂದು ಗಳಿಗೆ ಮರೆತುಸೊಲ್ಲ
ಮೌನವಾಂತವು–ಮನದಿ
ಭ್ರಮೆಯನಾಂತವು.

೨

ನಿದ್ದೆತೊರೆದು ನಿಶೆಯು ಕೂಡ ಆಲಿಸಿದ್ದಳು
ಹೊನ್ನ ಶಶಿಯು ನಿನ್ನ ಕಡೆಗೆ ವಾಲಿಸಿದ್ದಳು
ಇರಲು ನಿನಗೆ ವನ್ಯ ಭವನ
ಹಾಡುವಂತೆ ಕನಸ ಕವನ
ಸೊಬಗ ಸವಿಯ ಬಲ್ಲ ಸುಮನ
ಯಕ್ಷ ವೀಣೆಯು–ನಿನ್ನ
ದಕ್ಷವಾಣಿಯು.

೩

ಕೊರಳ ಗಾನ ಗಾಳಿಯಲ್ಲಿ ತೇಲಿ ಹೋಯಿತು
ಇರುಳ ನೀರವದಲಿ ಕೊನೆಗೆ ಲೀನವಾಯಿತು
ಬೆಟ್ಟದಿಂದ ಬಯಲ ತಡಿಗೆ
ನೆಲವ ಜಲವ ಸೋಂಕಿ ಕಡೆಗೆ
ವ್ಯೋಮದಲ್ಲಿ ಸೋಮನೆಡೆಗೆ
ಏರಿ ಹೋಯಿತು-ಗಾನ
ಆರಿ ಹೋಯಿತು.

೪

ಎನ್ನ ಬಾಳ ಕುಸುಮವರಳಿ ತೊಂಗಲಾಗಿದೆ
ನಿನ್ನ ಗಾನ ನಡುವೆ ಕುಣಿವ ಭೃಂಗವಾಗಿದೆ
ಹರಿಯುತಿರುವ ಹಾಡಿನೊರತೆ
ಕೇಳಿ ಕುಡಿದು ಮೈಯ್ಯ ಮರೆತೆ
ಆದರೆನಗೆ ಒಂದು ಕೊರತೆ
ಕಟ್ಟಲಾರೆನೇ- ಚೆಲುವ
ಮುಟ್ಟಲಾರೆನೇ.

೫

ನಿನ್ನ ಗಾನಕೊಂದು ತಾನವಿಹುದೆ ? ತಿಳಿಯೆನು
ಇರಲಿ ಇಲ್ಲದಿರಲಿ ನಾನು ಹುಡುಕಲಿಳಿಯೆನು.
ಒಮ್ಮೆ ಹಾಡು ಧವಳ ಶಿಲೆ
ಮತ್ತೆ ಹೂವ ಮಧುರ ನೆಲೆ
ಮರಳಿ ಚಿಗಿವ ಮಿಂಚ ಬಲೆ
ಏನನರಸಲೆ—ನೀನೆ
ಗಾನದಾ ಸೆಲೆ !

೬

ರಾತ್ರಿಯಲ್ಲಿ ನಿನ್ನ ದನಿಗೆ ಮರುಳುಗೊಂಡೆನೇ
ನೋವ ಹೂತು, ಸಾವ ಮರೆತು ಸೊಬಗನುಂಡೆನೇ
ರಾಗರತಿಯ ಕಂಡು ನಿಂದೆ
ಕಾವಿನೊಳಗೆ ಬೆಂದು ಬಂದೆ
ನಾದಸರಸಿಯೊಳಗೆ ಮಿಂದೆ
ಪುಳಕಗೊಂಡೆನು—ಹೊರಗೆ
ಬೆಳಕ ಕಂಡೆನು.

---

# ಬೇಡ

ಬೇರೆ ಲೋಕದ ಬೇಡ ಬಿಲ್ಲ ಬಗ್ಗಿಸಿ ನಿಂತು
ಎನ್ನೆಡೆಗೆ ಗುರಿಯಿಟ್ಟು ನಗುವೆಯೇಕೋ ?
ಎಣ್ಣೆ ಆರುವ ಮೊದಲು ಜ್ಯೋತಿ ನಂದುವ ಮುಂಚೆ
ಈ ಹಣತೆಯನ್ನೊಡೆವ ಸಾಹಸವದೇಕೋ ?

ಬಾಳೆಂಬ ರಸವೀಣೆ ನುಡಿಸಿಲ್ಲ ನನ್ನಾಣೆ
ವರುಷವಿಪ್ಪತ್ತೊಂದು; ಏಗೈವೆನಯ್ಯ ?
ಜ್ಞಾನಗಳಿಸುವ ಬಯಕೆ ಬಾಳಬೇಕೆಂಬಾಸೆ
ಮುಗಿಲ ಗೋಪುರದಂತೆ ಮಾಯವೇನಯ್ಯ ?

ಮಮತೆ ಮಲ್ಲಿಗೆ ಸೊಗವ ಕೀರ್ತಿಫಲಗಳ ಜಗವ
ಸುಖದ ಸರಸಿಯನರಸಿ ಬಾನಿನಂತ
ಹಾರಲೇರಿದ ಹಕ್ಕಿ ನಿನ್ನ ಬಾಣಕೆ ಸಿಕ್ಕಿ
ಗಾಸಿಯಾಗುವುದೇನು ನಿನ್ನ ಪಂಥ ?

ದುಃಖದನುಭವವಿಲ್ಲ ಹಸಿವಿನರಿವೆನಗಿಲ್ಲ
ನಗುತಲೇ ಬಾಳಿರುವೆ ಇನ್ನುತನಕ
ಬಾಳ ತಳಮಳ ತಿಳಿದು ಜಗದ ಝುಳವನು ಅಳೆದು
ನಸುನಗುತ ತೆರಳುವೆನು ತಿಳಿದ ಬಳಿಕ.

ಬೇರೆ ಲೋಕದ ಬೇಡ ಈ ವಿಶಾಲದ ಕಾಡ
ನಿನ್ನ ಬೇಟೆಗೆ ಕೊಂಡು ನಡೆಯೊ, ಮುಂದರಿಸು
ಚೇತನದ ನರರೆದುರು ಸುರಚಾಪವೇನಂತೆ ?
ಹಿಂತೆಗೆದು ಬಾಣವನು ಬತ್ತಳಿಕೆಗಿರಿಸು.

---

# ಬಯಲಾಸೆ

ಮರವಾಗಬೇಕೆಂಬ ಬಯಕೆಯಿಂದಾನು
ಮಾಮರವ ಕಾಡಿದೆನು “ ಗೆಳೆಯ ಪೇಳು
ತೆಂಗು ಕೌಂಗುಗಳಂತೆ ನಿನ್ನಂತೆ ನಾನು
ಹೇಗಾಗಬಲ್ಲೆನೈ ತಿಳಿಯ ಹೇಳು
ರೆಂಬೆಗಳು ಬದಿಯಲ್ಲಿ
ಎಲೆರಾಸಿ ತಲೆಯಲ್ಲಿ
ಎಂತು ಹುಟ್ಟುವವಯ್ಯ ? ಸಾಕು ನರಬಾಳು.”

ಎಲರಿಂಗೆ ಮಾಮರವು ತಲೆದೂಗಿಯೊಮ್ಮೆ
ಚಣಕಾಲ ಮೌನದಿಂ ನೋಡಿ ಎನ್ನ
ಚಿಗುರೆಲೆಯ ಸಂಕುಲವನಲುಗಿಸುತಲೊಮ್ಮೆ
ಮೆಲ್ನುಡಿಯಲಿಂತೆಂದು ಕೇಳಿತೆನ್ನ
“ ನರಜನುಮವನು ಬಿಟ್ಟು
ಹಸುರಂಗಿಯನು ತೊಟ್ಟು
ತರುವಾಗಲೇತಕ್ಕೆ ಆಶಿಸುವೆಯೇನಣ್ಣ ?”

“ ಮಾನವನ ಜೀವನವು ಸಾಕುಸಾಕಾಯ್ತು
ದ್ವೇಷದೂಷಣೆಗಳನು ಕೇಳಿ ನೊಂದೆ
ನರಜನ್ಮದಲಿ ಎನಗೆ ಬೇಸರಿಕೆಯಾಯ್ತು
ಮರವಾಗೆ ನಾನಿನ್ನ ಬಳಿಗೆ ಬಂದೆ
ನರವೇಷವನು ತೊರೆದು
ತರುರೂಪವನು ತಳೆದು
ಬಾಳುವಂತೆನಗೆ ನೀ ದಾರಿ ತೋರೆ”ಂದೆ.

ಇನ್ನೊಮ್ಮೆ ಸುಯ್ಯೆಂದು ಬೀಸಿದುದು ಗಾಳಿ
ಕಾನನದ ಮರಗಳಿಗೆ ಒಸಗೆ ಬಿಡಲು
ಮುಚ್ಚಿದೆವೆಗಳ ತೆರೆವ ಮುನ್ನ ವೃಕ್ಷಾಳಿ
ಸಜ್ಜೆಸೇರಿ, ತೋರಿದುದು ಸೊಬಗ ಕೂಡಲು
ಬಂದಿರುವ ಹುಲುನರನು
ತನ್ಮಾವರ ಪಾಳ್ಯವನು
ಸೇರಲಿಹ ಯೋಜನೆಗೆ ಅಭಿಮತವ ಕೊಡಲು

ಸಾಗರದ ತೆರೆಯಾಗ ದಡವನಪ್ಪಳಿಪ
ಸಪ್ಪಳದ ಗರ್ಜನೆಯು ಕೇಳಿತೆನಗೆ
ನೀಲನೆಲಗಳಿಗೆಲ್ಲ ಭಯುಜಲವ ತಳಿಪ
ಗಂಭೀರ ಸಂದೇಶಬಿತ್ತು ಕಿವಿಗೆ—
" ವೈಯ್ಯಾರ ವೈಭವದ
ಸಿರಿಸೊಬಗು ಸಂಭ್ರಮದ
ತರುವಾಗಲಾರೆ ನೀ ನಡೆ ನರನೆ ಮನೆಗೆ.

" ನೂರುದಾರಿಗಳಿನ್ನು ನಡೆದಿಲ್ಲಿ ಬಾರ
ಮರವಾಗಿ ಮೆರೆಯುವುದು ಸುಲಭವಲ್ಲ
ಮೊದಲು ಹುಲ್ಲೆಸಳಾಗಿ ಜ್ಞಾನವನು ತಾರ
ಅಜ್ಞನಾಗಿಹ ನರನು ತರುವಾಗಲೊಲ್ಲ
ಹೊತ್ತಿರುವ ಋಣತೆತ್ತು
ಪುಣ್ಯಬೀಜವ ಬಿತ್ತು
ಮತ್ತೆ ಬಾ ನೀನಿತ್ತ ಕೇಳುವವರಿಲ್ಲ !"

---

# ಭಾರತಿ

೧

ನೀಲ ನಭದ ತಾರೆ ನೀನು
ದೇವ ನೊಲುಮೆಮಗಳು ನೀನು
ಜನನಿ ನಿನ್ನ ಉದಧಿಯಲ್ಲಿ ದೇವಪೀಠವು
ನಿನ್ನ ಮೇರುವವನ ನಲುಮೆನವಕಿರೀಟವು.

೨

ವಿಶ್ವದುಳಿದ ದೇಶಗಳಲಿ
ನಿನ್ನ ಅಂದ ಚಂದವಿಲ್ಲ
ನಿನ್ನ ತೊಡೆಯ ಮೇಲೆ ಪುಣ್ಯ ನದಿಗಳಿರುವವು
ಮತ್ತೆ ಬಹಳ ಸೊಗದ ದೊಡ್ಡ ಗಿರಿಗಳಿರುವವು.

೩

ತಿರೆಯ ಆದಿಯಿಂದ ನೀನು
ಸಕಲವನ್ನು ನೋಡುತಿರುವೆ
ನಿನ್ನ ಸುತ್ತ ಹೂಗಳಂತೆ ಕಾಲದಾಟಿದೆ
ನಿನ್ನ ಹೊರತು ಉಳಿದ ಎಲ್ಲ ವಿಭವು ಹೋಗಿದೆ.

೪

ಹಿರಿಯ ಅಮ್ಮ ಅಕ್ಕರೆಲ್ಲ
ಇನ್ನು ಬರುವ ತಂಗಿರೆಲ್ಲ
ನಿನ್ನ ಹಿಂದೆ ಬಿಟ್ಟು ತಾವು ಹೊರಟು ಹೋಗಲು
ನೀನು ಮಾತ್ರ ಉಳಿವೆ ಹೇಳಿ ತೋರಲು.

೫

ಭುವಿಯ ಸರ್ವ ಕಡೆಗಳಲ್ಲಿ
ಇರುವ ನಿನ್ನ ಮಕ್ಕಳೆಲ್ಲ
ಭಾರತೀಯರೆಂದು ತಾವು ಹೆಮ್ಮೆ ಪಡುವರು
ಭರತ ದೇಶ ತಮ್ಮದೆಂದು ಹೇಳಿ ನಲಿವರು.

೬

ನಿನ್ನ ಪುಣ್ಯ ಸಂಗ ದೊರಕೆ
ಮತ್ತೆ ನಿನ್ನ ಪ್ರೇಮ ಲಭಿಸೆ
ಯಾವ ನಿನ್ನ ಶಾಂತಿಯಲ್ಲಿ ಲೀನವಾಗನು !
ಆವ ಮನುಜ ನಿನ್ನ ಪ್ರೇಮದೊಲವ ತಿಳಿಯನು !

೭

ಸಗ್ಗ ನೀನೆ ಸಿರಿಯು ನೀನೆ
ಮುಕ್ತಿ ನೀನೆ ಒಲವು ನೀನೆ
ನಿನ್ನೊಳೆಮ್ಮ ಜನುಮ ಬರಲಿ ಎಂಬುದಾಶೆಯು
ನಿನ್ನ ಸಂಗ ದೊರಕೆ ಅದುವೆ ನಮಗೆ ತೋಷವು

---

# ದುಂಬಿ

೧

ದುಂಬಿಯು ಹಿಂಡದು ಕಾಣುತಿದೆ
ಪರಮಾನಂದದಿ ಓಡುತಿದೆ
ಹಾಡನು ಹಾಡುತ
ಕಾಂತಿಯು ಬೀರುತ
ಮಲೆಗಳ ಕಡೆಗೆಯೆ ಓಡುತಿದೆ.

೨

ಮಳೆ ಚಳಿ ಬಿಸಿಲಿಗೆ ಭಯಪಡದೆ
ಅರಳಿದ ಹೂಗಳ ಮಧು ಬಿಡದೆ
ಸುಂದರ ದಿನದಲಿ
ಸುಂದರ ಬನದಲಿ
ಸತತವು ನಲಿವುದು ಎದೆಕೆಡದೆ.

೩

ಅಂಬರಚುಂಬಿತ ಗಿರಿಗಳಲಿ
ಸೊಂಪಿನ ವನನದಿಝರಿಗಳಲಿ
ಮುದದಲಿ ಹಾರುತ
ಮಧುವನು ಅರಸುತ
ಹಾರುತಲಿದೆಯತಿಲೀಲೆಯಲಿ.

೪

ಕರ್ಮ ವೇದಾಂತ ಸಾರುತ್ತ
ಹೂವಿಂದ ಹೂವಿಗೆ ಹಾರುತ್ತ
ಸೊಬಗನು ಬೀರುತ
ಜೇನನು ಹೀರುತ
ಬೇಗನೆ ಬರುವುದು ಗೂಡತ್ತ

೫

ಕೆಲಸಕೆ ಹೇಸುವ ಸೋಮಾರಿ
ಬಯಲಿನ ಅಲುರುಣಿ ಬಳಿಸೇರಿ
ಪಾಠವ ಪಠಿಸುತ
ಕೆಲಸವ ಕಲಿಯುತ
ತಿಳಿಯೋ ಸಗ್ಗದ ನಿಜದಾರಿ.

---

# ಪ್ರಾರ್ಥನೆ

೧

ದೇವ ನಿನ್ನ ಕೀರ್ತಿಯನ್ನು
ಸಾರುತಿರುವೆವು.
ತಾರೆ ಕಡಲು ವನವು ಗಿರಿಯು
ವೇದ ಶಾಸ್ತ್ರ ಉಪನಿಷತ್ತು
ಜೀವ ಕೋಟಿ ನಿಚಯವೆಲ್ಲ
ನಿನ್ನ ನುತಿಪವು.
ನಿನ್ನ ಮಹಿಮೆ ಕಂಡು ಕೇಳಿ
ಹಿಗ್ಗಿ ನಲಿವವು.

೨

ರವಿಯ ಉದಯಕಾಲದಲ್ಲಿ
ಜ್ಞಾನ ಕಳುಹುವೆ
ಮತ್ತೆ ರಜನಿಯೊಡನೆ ನಮಗೆ
ಪ್ರೇಮವೆಂಬ ಮಿಂಚ ಕೊಟ್ಟು
ಭಕ್ತಿಯೆಂಬ ಕಾಣ್ಕೆಯನ್ನು
ಗ್ರಹಣ ಮಾಡುವೆ.
ಭಕ್ತರನ್ನು ಬಳಿಕ ನಿನ್ನ
ಬಳಿಗೆ ಕರೆಯುವೆ

೩

ನಿನ್ನ ಮಹಿಮೆಯನ್ನು ನಾವು
ತಿಳಿಯ ಬಲ್ಲೆವೇ ?

ಮಕ್ಕಳಿಂದ ನಮ್ಮ ನೀನು
ಸತ್ಯನ್ಯಾಯವೆಂಬ ಗಹನ
ತಕ್ಕಡಿಯಲಿ ತೂಗಿ ಬಳಿಕ
ತುಲನೆ ಮಾಡುವೆ
ಪಾಪಪುಣ್ಯಗಳಿಗೆ ತಕ್ಕ
ಪಡಿಯನೀಡುವೆ.

೪

ದೇವ ನಿನ್ನ ಸೇವೆಯನ್ನು
ಮಾಡುವಂದದಿ,
ಬದುಕಿನಲ್ಲಿ ಸಾವಿನಲ್ಲಿ
ಮುಂದೆ ಬರುವ ಜನುಮಗಳಲಿ
ನಿನ್ನ ನೆನಹು ಇರುವ ತೆರದಿ,
ಮಾಯೆಯಧಿಪತಿ !
ಕೃಪೆಯ ಮಾಡಿ ಕಾಯೊ ನಮ್ಮ
ವರಕೃಪಾನಿಧಿ !

---

# ಬಾರಯ್ಯ ಮೃಗಧರನೆ

೧

ನಡೆದು ಬಳಲಿಹ ರವಿಯು
ಸಂಜೆಯನು ರಂಜಿಸುತ
ಆಗಸವ ಬೀಳ್ಕೊಂಡು
ಹೋಗಿರುವನು.
ಪಡುಕಡಲ ಬಳಿಸಾರಿ
ಮುಳುಗಿರುವನು.

೨

ನಲ್ಲನನು ಅರಸುತ್ತ
ಗಗನದಲಿ ನಿಶೆಯು ಅತಿ
ಸೊಗಸು ಸಿಂಗರದಿಂದ
ಬಂದಿರುವಳು.
ತನ್ನ ಪ್ರೇಮದ ನಿಧಿಯ
ಕಾಯುತಿಹಳು.

೩

ಬಾನಿನಲಿ ತೇಲುತಿಹ
ಮುಗಿಲುಗಳ ಮರೆಯಿಂದ
ಸಂಜೆಯಲಿ ಚಂದಿರನು
ಇಣಕುತಿಹನು.
ತನ್ನಿನಿಯಳನು ಕದ್ದು
ನೋಡುತಿಹನು.

೪

ಬಾರಯ್ಯ ಮೃಗಧರನೆ
ಮರೆಯನ್ನು ಬಿಟ್ಟು ಬಾ
ಭೂಮಿ ಆಗಸಗಳನು
ಬೆಳಕುಮಾಡು.
ರಮಣಿ ನಿಶೆಯಾ ಮನಕೆ
ಮುದವ ನೀಡು.

೫

ನೀನಲ್ಲವೇ ಜಗದ
ದುಗುಡವನು ಕಳೆದೊಗೆವ
ನಭವನ್ನು ಬೆಳಗುತಿಹ
ಶಾಂತಿ ಶೂರ ?
ತಪನತಾಪವ ತಣಿಪ
ಶಾಂತಿ ಧೀರ ?

೬

ನಿನ್ನ ಕಂಡೊಡೆ ಶರಧಿ
ತಾನುಬ್ಬಿ ಭರತದೊಳು
ಪರಮ ಸೌಂದರ್ಯದಿಂ
ನಲಿವುದೇಕೆ ?
ಕಮಲಿನಿಯು ಮೊಗವಿಳುಹಿ
ಮುಚ್ಚುದೇಕೆ ?

೭

ಮೇದಿನಿಯು ಮನವನ್ನು
ಹರಣ ಮಾಡುವ ಇಂದು !
ನೀನಲ್ಲವೇ ತಿರೆಯ
ಚಂದವಮಾಮು.
ನಿನ್ನೊಳಲ್ಲವೆ ಜಗದ
ಶಾಂತಿಧಾಮು !

---

# ಭಿಕ್ಷುಕ

ಮನೆಯ ಕೋರೆನು ನಾನು ಪದವನಿಚ್ಛಿಸೆ ನಾನು
ಬೇಕಾದುದೆನಗಿಹುದು ನಿಮ್ಮ ಹಂಗೇನು ?
ಭಾವನೆಯ ಕಡಲಲ್ಲಿ ಹಡಗೊಂದು ಬರುತಿಹುದು
ವಿಧವಿಧದ ಸಿರಿಯಿಂದ ತುಂಬಿ ತುಳುಕಿಹುದು.

ದುಃಖದಾ ಕಣ್ಣೀರ ಎಡೆಬಿಡದೆ ಎರೆದೆರೆದು
ಬಾಲ್ಯದಲಿ ಬೆಳೆಸಿದ್ದ ಮರಗಳಲಿ ಕೊರೆದು
ಸತ್ಯವೆಂಬುವ ಹಾಯಿಂದಲದ ಸಿಂಗರಿಸಿ
ಕಡಲಿನಲಿ ತೇಲಿಸಿಹೆ ನಂಬಿಗೆಯನಿರಿಸಿ

ಜೀವವಾಹಿನಿಯಲ್ಲಿ ರಮ್ಮೊಂದು ಬೀಸುತಿದೆ
ಕರ್ಮ ಮಾರುತ; ಸತತ ನೌಕೆ ನಡೆಯುತಿದೆ.
ದೂರದೂರದ ದೇಶಗಳಿಗೆ ಪಯಣವ ಬೆಳೆಸಿ
ನನ್ನೆಡೆಗೆ ಬರುತಲಿದೆ ಹಾಯಿಗಳ ಬಿಡಿಸಿ

ನಗೆಗಡಲ ನೀರನ್ನು ಕಥೆನಾಡ ನಗವನ್ನು
ಸೌಂದರ್ಯ ಸಾಗರದ ರತ್ನಾದಿಗಳನು
ಸುಖದೂರ ಸುಖವನ್ನು ಗಾಯನದ ರಸವನ್ನು
ತಂದಿಹುದು ಎನಗಾಗಿ ವಿವಿಧ ಸಿರಿಗಳನು.

ಜನಗಳನು ನಗಿಸುವೆನು, ಹಾಡುಗಳ ಹಾಡುವೆನು.
ದೂರ ದೇಶದ ಕಥೆಯ ಮುದದಿ ಹೇಳುವೆನು.
ದಾಸಿಗಳನರಸುತ್ತ ಸುತ್ತುವೆನು ಮನೆ ಮನೆಗೆ
ನೀಡುವರು ಭಿಕ್ಷೆಯನು ಬಡ ಭಿಕ್ಷುಕನಿಗೆ.

# ಉದಯ ಮಾರುತ

ಉದಯ ಕಾಲದಿ ಕಡಲ ಕರೆಯಿಂದ ವೇಗದಿಂ
ಸುಸುಳಿ ಬಹ ಮಾರುತನು ತರುಲತಾಳಿಗಳ
ಬಳುಕಿಸುತ ಬಗ್ಗಿಸುತಲೊತ್ತಿ ಮುತ್ತಿಡುವಾಗ
ವಿಶ್ವವೆಲ್ಲವು ಕರ್ಮರಂಗಕಿಳಿಯುವುದು
ಸಿರಿದೆನಿಪ ಕಳ್ತಲೆಯ ರಾಶಿಯನು ತೆಗೆದೊಗೆದು
ತಂಬೆಲರು ಮುಂಬರಿದು ಕಮಲಗಳ ಬಿರಿದು
ಅಂಬುಜದ ಘಮಘಮಿಪ ಪರಿಮಳಕೆ ಶಿರಬಾಗಿ
ವನವೀಥಿಗಳ ಹೊಕ್ಕು ಹೊರ ಹೊರಡುತಿಹುದು
ಉದಯದೂತನು ಗಾಳಿ " ರಾತ್ರಿಕಳೆಯಿತು ಏಳಿ
ಹಾಯ ಬಿಡಿಸಿರಿ ಹೋಗಿ " ಎಂದೊಮ್ಮೆ ಕೂಗಿ
ನಾವಿಕರನೆಬ್ಬಿಸುತ ಕಡಲಕಡೆ ಕಳುಹಿಸುತ
ಹರಿಯುತಿಹ ನವಸರದಿ ಪೊದೆ ಹುಲ್ಲ ಬನದಿ
ಮಾಮರದ ಮೇಲ್ಕುಳಿತು ಎಳೆಯ ತಳಿರನು ತಿಂದು
ನಚ್ಚಿನಿನಿಯಳ ಬರವ ನೋಡುತ್ತಲಿರುವ
ಇಂಚರದ ಕೋಗಿಲೆಯ ಮೈದಡವಿ ಎಚ್ಚರಿಸಿ
ಗಾನ ಪಥದಲಿ ಕಳುಹಿ ಪ್ರೀತಿಯನು ತಿಳುಹಿ,
ದಿವ್ಯ ಶಾಂತತೆ ಬೀರಿ ದೇಗುಲದ ಬಳಿಸಾರಿ
ಅರ್ಚಕನನೆಚ್ಚರಿಸಿ ಕುಲುಕಿ ಕುಳ್ಳಿರಿಸಿ,
" ಮೂಡಣಾಗಸನೋಡು ಸ್ನಾನ ಮಾಡಲು ಹೊರಡು
ದೇವಪೂಜೆಗೆ ಇನ್ನು ಹೊತ್ತೇಕೆ ?" ಎಂದು
ಬಳಲಿ ನಿದ್ರಿಸುತಿದ್ದ ಸತತ ಸುಖಿ ರೈತನನು
ಮೆಲುಮೆಲುನೆ ಕಣ್ತೆರೆಸಿ ಕನಸನ್ನು ಬಿಡಿಸಿ
' ಹೊತ್ತಾಯ್ತು ಏಳೇಳು ! ಉತ್ತಾಯ್ತೆ ? ಬಿತ್ತಿದೆಯ ?
ಮೂಡುವನು ಮೂಡಲಲಿ ರವಿ " ಎಂದು ಹೇಳಿ,'

ಗಗನಗುಮ್ಮಟದಲ್ಲಿ ಏರಿ ಬರಲಿಹ ರವಿಗೆ
ಹಕ್ಕಿಗಳ ಚಿಲಿಪಿಲಿಯ ಗಾನಸುಧೆಯಿಂದ
ಪ್ರೇಮದಂಜಲಿಯಿತ್ತು ಮನವ ಸಂತಸಪಡಿಸಿ
ಮಲ್ಲಿಗೆಯ ಮೊಗ್ಗುಗಳ ಆರತಿಯ ನೀಡಿ
ಬುವಿಯಲ್ಲಿ ಬಿದ್ದಿದ್ದ ಬಿಳಿಮಂಜನಪ್ಪುತ್ತ
ಚಿಗುರೆಲೆಯ ಸಂಕುಲಕೆ ತಲೆ ಎತ್ತ ಹೇಳಿ
ಬಣ್ಣನೆಗೆ ಬಾರದಿಹ ಸೊಗಸುಸಿಂಗರವನ್ನು
ಉದಯ ಕಾಲಕೆ ಕೊಡುತ ಒಡವೆ ಇಡುತ,
ಜಲಧಿಯಲೆಗಳ ಚದರಿ ಕರಿಮುಗಿಲುಗಳ ಬಿದಿರಿ
ತಳಿರುಗಳ ಲೋಲಾಡಿ ಹೂವಿನೊಡಗೂಡಿ
ಶೃಂಗಾರ–ಸೌಂದರ್ಯ, ಲಲಿತ–ಸುಂದರ ಜ್ಯೋತಿ
ಬರುವ ಮುನ್ನೋಡುವನು ಉದಯ ಮಾರುತನು.

---

# ಬಡಗಿ

೧

ನಾನಾರೀತಿಯ ಉಳಿಗಳ ಹಿಡಿದು
ವಿಧವಿಧ ಜಾತಿಯ ಮರಗಳ ಕಡಿದು
ಕೋಟ್ಯಾನುಕೋಟಿ ಜನಗಳ ಮಾಡಿ
ಅವರಿಗೆ ತರತರ ಗುಣಗಳ ನೀಡಿ
ಜೀವನಬಡಗಿಯು ಕೆತ್ತುವನು.

೨

ವನಬಿರುಗಾಳಿಯ ಹೊಡೆತಕೆ ಬಿದ್ದು
ಕೆತ್ತನೆ ಮರದಲಿ ಬಿರುಕುಗಳಿದ್ದು
ಕೆತ್ತಿದುದೆಲ್ಲವು ಸುಂದರವಾಗಿ
ಎಂದೂ ಆಗದು. ಉಪಾಯ ನೀಗಿ
ಜೀವನಬಡಿಗೆಯು ಕೆತ್ತುವನು

೩

ಕೆಲವಕೆ ಕೊಡುವನು ಸುತ್ತಿಗೆ ಏಟು
ಉಳಿದಿಹ ಕೆಲವಕೆ ಉಳಿಗಳ ಪೆಟ್ಟು
ಇನ್ನೂ ಕೆಲವಕೆ ಕೀಸುಳಿ ತೀಡಿ
ದೊರಗನು ತೆಗೆಯುತ ನುಣ್ಣಗೆಮಾಡಿ
ಜೀವನಬಡಗಿಯು ಕೆತ್ತುವನು

೪

ವೇದನೆ ಸಹಿಸುತ ತಾಳ್ಮೆಯೊಳಿರಲು
ಮುಂದಿನ ದಾರಿಯು ಸರಿಯಾಗಿಡಲು
ಹರಿತದ ಗರಗಸ ಚಕುರದಿ ನಡೆಸಿ
ಮೆಲ್ಲನೆ ನುಣ್ಣನೆ ಹಲಿಗೆಯು ಕಡಿಸಿ
ಜೀವನಬಡಿಗೆಯು ಕೆತ್ತುವನು

೫

ಅಲ್ಲೊಂದಿಲ್ಲೊಂದೇಟನು ಬಿಟ್ಟು
ಭಕುತಿಯು ಹುಟ್ಟಲು ದುಃಖವಕೊಟ್ಟು
ಅನುಭವದಿಂದಲಿ ಜ್ಞಾನವ ತಿಳಿಸಿ
ಭಕುತರ ಗಾನವ ದೇವಗೆ ಕಳಿಸಿ
ದೇವನಬಡಗಿಯು ಕೆತ್ತುವನು

---

# ಪರೀಕ್ಷೆ

ನಿನ್ನ ನೆಲೆಯನು ಅರಿಯಲಾರೆ ಭಿಕ್ಷುಕನೆ
ಮೌನದಿಂ ನಸುನಗುತ ಇತ್ತೇಕೆ ಬರುವೆ ?
ಜರಗಾಗಿ ಹೋಗಿರುವೆ ನಿನ್ನ ವ್ಯಸಿರಿಗೆ
ದೇಹಿ ದೇಹೆನ್ನುತ್ತ ಬರುತಿರುವ ಪರಿಗೆ.

ನಿನ್ನ ಮೋರೆಯ ನೋಡೆ ಹುಟ್ಟುವುದು ಭಕುತಿ
ನಿನ್ನ ಕಣ್ಣಿನಲಿಹುದು ಶಾಂತಿಸಾಗರವು
ಚಿಂದಿ ಬಟ್ಟೆಗಳೊಳಗೆ ತೋರುತಿದೆ ವಜ್ರ
ವೈಡೂರ್ಯ ಕನಕಾದಿ ನವರತ್ನ ಸಿರಿಯು

ನಾ ಬಡವ ನಿನಗೆನ್ನ ಬವಣೆ ತಿಳಿದಿಹುದು
ನನ್ನಲ್ಲಿ ಬೇಡಬಂದುದರರ್ಥವೇನು ?
ಕಲ್ಪ ವೃಕ್ಷವೆ ನೀನು, ಅಂತಾದಬಳಿಕ
ಬಡವನನು ಪರಿಕಿಸಲು ಬಂದಿರುವೆ ಏನು ?

---

# ಉಷೆಯ ಆಗಮನ

ಶಂಖಧ್ವನಿಯಿಂ ಧರೆಯನೆಬ್ಬಿಸಲು
ಅಂಧಕಾರವ ಸಿಡಿದು ಹೊರಬಂದ ಬಳಿಕ
ಚಂದಿರನ ಬಿಟ್ಟೆದ್ದು ಮುಂಬೆಳಕ ನಭದ
ಅಂಗಳಕ್ಕೆಳೆದು ನಗುತ ನಲಿವೆಯೇನಮ್ಮ ?

ಸಂತಸದ ಬೆಳದಿಂಗಳನು ಬಿಟ್ಟು ಬಂದು
ಸೊಂಪಾದ ತಂಗಾಳಿಯನು ಕರೆದು ತಂದು
ಅಂಡಜನ ಸೃಷ್ಟಿಗೆ ನವ ಸೊಗವನಿತ್ತು
ಬ್ರಹ್ಮಾಂಡವನು ಬೆಳಗೆ ಬಂದೆಯೇನಮ್ಮ ?

ಶೈಲಶೃಂಗದ ಮೇಲೆ ನಿಂದು ನಲಿನಲಿದು
ಕೈಲಾಸಶಿಖರವನು ಭರದಿಳಿದು ಬಂದು
ಬೈಲಿನಲಿ ಕೊಳೆತು ನಾರುತಿಹ ಕತ್ತಲೆಯ
ಮೈಲಿಗೆಯ ತೊಳೆಯಲು ಬಂದೆಯೇನಮ್ಮ ?

ಕಮಲ ಮಿತ್ರನನಗಲಿ ವಿರಹವ್ಯಥೆಯಿಂದ
ತಮದ ತಾಪಕೆ ಬೆದರಿ ಮರುಗುತ್ತಲಿದ್ದ
ಕಮಲಿನಿಯ ವ್ಯಥೆಯನ್ನು ಶಮನ ಮಾಳ್ಪ
ಕಮನೀಯ ಕಾಮಿನಿಯು ನೀನೆ ಏನಮ್ಮ ?

ಶ್ವೇತ ವಸ್ತ್ರವ ಧರಿಸಿ ಪುಷ್ಪವನು ಮುಡಿದು
ನೀತಿಯನು ಬೋಧಿಸುವ ಜ್ಯೋತಿಯನು ಹಿಡಿದು
ಪ್ರೀತಿಯಿಂದಲಿ ಧರೆಗೆ ಕುಂಕುಮವ ಹಂಚಿ
ದಾತಳೆನ್ನಿಸಿಕೊಂಡು ಮೆರೆವೆಯೇನಮ್ಮಾ ?

---

# ಸುಳ್ಳು

ಉಡುರಾಜ ಮೌನದಿಂ ಮುಳುಗಲನುವಾಗಿರಲು
ಉಷೆರಮಣಿ ಮೆಲುಮೆಲನೆ ಬುವಿಗೆ ಒರಲು
ಸುಳಿಯುತಿಹ ತಂಗಾಳಿ ಒಲುಮೆ ತೋರುತಲಿರಲು
ಮಲಗಿರುವ ನಾನೊಂದು ಕನಸ ಕಂಡೆ

ದೇವಮೂರುತಿಯೊಂದು ಎನ್ನ ಮೋರೆಯ ಮುಚ್ಚಿ
“ ನಲ್ಲೆಯನು ಬಂಧಿಸುತ ಬಾಹುಗಳಲಿ
ಅಧರಕಧರವನೊತ್ತಿ ದಾಂಪತ್ಯ ದೋಣಿಯನು
ನಡೆಸಿಹೆಯ ಹೇಳೆ”ಂದು ಕೇಳೆ ನಾನು
“ ಇಲ್ಲ. ನಾನಾ ಸುಖವ ಕಂಡರಿಯೆ ದೇವ
ಸುಮ್ಮನೇತಕೆ ಪರಿಕಿಸುವೆ ಎನ್ನ ಭಾವ ”
ಎನ್ನುತ್ತ ಎಚ್ಚತ್ತೆ ಎನ್ನ ಬಳಿಯಲಿ ಸುಖದಿ
ಎಡಗೈಯ ತಲೆಯಡಿಯೊಳಿಟ್ಟು ಮಲಗಿ
ನಿದ್ರೆಯಲಿ ನಸುನಗೆಯ ಬೀರುತಿಹ ಮಡದಿಯನು
ಕಂಡು ತಬ್ಬಿಬ್ಬಾದೆ ಮನಸಿನೊಳಗೆ
ಹೃದಯಮಂಡಪದಲ್ಲಿ ರಾಜ್ಯಭಾರವ ಮಾಡಿ
ಸಂಸಾರಸಾಗರವ ದಾಂಟಲೆನ್ನ
ಕೈಹಿಡಿದು ದುಷ್ಕರದ ಮಾರ್ಗದಲಿ ನಡೆಸಿರುವ
ನಿಜಸತಿಯ ಕಂಡಿಲ್ಲ ಎಂದೆ ಹುಸಿಯ.
ನಿನ್ನೆ ಹೇಳಿದುದೇಕೆ ಸುಳ್ಳೆಂದು ಜನನು
ಮುಂಜಾನೆ ಕೇಳಿದರೆ ಏನ ಹೇಳುವೆನು ?

---

# ಯಾತ್ರಿಕ

( ಶ್ರೀ. ಅವನೀಂದ್ರನಾಥ ಠಾಕೂರರ 'ಚೀನಯಾತ್ರಿ-ಯುಯೆನಜಂಗ' ಎಂಬ ವರ್ಣಚಿತ್ರದಿಂದ ಪ್ರೇರಿತವಾದುದು )

ಮಾತೃಭೂಮಿಯ ಬಿಟ್ಟು
ಭಾರತಕೆ ಕಾಲಿಟ್ಟು
ಊರೂರ ಸುತ್ತುವೊಡೆ ಬಂದೆ ಯಾತ್ರಿಕನೇ ?
ಭಾರತದ ಇತಿಹಾಸ
ಬರೆದ ಸರಸತಿ ದಾಸ
ನಿನ್ನ ಮರೆಯುವೆವೆಂತು ಚೀನ ಮಾಂತ್ರಿಕನೇ ?

ಸಾರ್ವಭೌಮರ ನೋಡಿ
ಯೋಗಿಜನರೊಡಗೂಡಿ
ಬುದ್ಧ ದೇವನ ವಚನಸುಧೆಯುಸುರಿ ಹೀರಿ
ಊರೂರುಗಳ ನಡೆದೆ
ಮತ್ತೆ ಪ್ರೇಮದಿ ಬರೆದೆ
ಭಾರತಿಯ ಇತಿಹಾಸ ಲೇಖನಿಯನೂರಿ.

ಹಸುರಂಗಿಯನು ತೊಟ್ಟು
ಕಾಲಬಟ್ಟೆಯನುಟ್ಟು
ಬೆನ್ನಿನಲಿ ಹೊತ್ತಿರುವೆ ಗ್ರಂಥಗಳ ಗಂಟು
ಕರದಿ ಹಿಡಿದಿಹೆ ಕೋಲ
ಮೆಟ್ಟು ಮುಟ್ಟಿದೆ ಕಾಲ
ಬಟ್ಟೆಬರಿ ತೋರುತಿದೆ ಯೋಗಿಗಳ ನಂಟು.

ಎಳೆ ಮೊಗದ ಸಿರಿ ಕಂದಿ
ಜೌವನದ ಕಳೆಗುಂದಿ
ಮುದಿತನದ ಮಬ್ಬಿನಲಿ ಮುಳುಗಿಹುದು ದೇಹ.

ಬೆಳಗಿಹುದು ನವತರುಣ-
ದುತ್ಸಾಹಗಳ ಕಿರಣ
ಭಾರತದ ಬಂಧುಗಳ ಮೇಲಿಹುದು ಸ್ನೇಹ.

ದಾರಿ ನಡೆಯುತ ಬಂದು
ಮರದ ನೆರಳಲಿ ನಿಂದು
ಏನನ್ನು ನೋಡುತಿಹೆ ಕವಿ ಹುಯೊನ ಜಂಗ ?
ಯೋಚನೆಯು ಮುಖದಲ್ಲಿ
ಮಾನ್ಯತೆಯು ದೃಷ್ಟಿಯಲಿ
ಕಾಣುತಿದೆ. ಎತ್ತ ಭಾವನೆಗಳ ತರಂಗ ?

ಸಿರಿಸುಖದ ಗುಡಿಯಾಗಿ
ಧರ್ಮಗಳ ನೆಲೆಯಾಗಿ
ಮೆರೆಯುತಿಹ ಭಾರತದ ಭವಿತವ್ಯ ಕಾಂಬೆ ?
ಈ ದಾಸ್ಯಶೃಂಖಲೆಯು
ಮಾನಸಿಕ ಅವನತಿಯು
ಪೂರ್ವ ಪ್ರತಿಭಾರಾಷ್ಟ್ರರಾಣಿಗೇಕೆಂಬೆ ?

# ನೀನು—ನಾನು

( ರವಿದಾಸನ ಭಕ್ತಿಗೀತೆಯೊಂದರ ಭಾವಾನುವಾದವಿದು )

ದೇವನೀ ಗಿರಿಯಾದೊಡಾನೊಂದು ಮರಿನವಿಲು
ಮೃಗಧರನು ನೀನಯ್ಯ ನಾ ಚಕೋರ
ನೀನೆನ್ನ ಕೈಬಿಟ್ಟರಿನ್ನಾರು ಹಿಡಿಯುವರು
ಪ್ರೇಮವನು ನಿನ್ನಲ್ಲಿ ಸಂಧಿಸಿಹೆನು.
ಪುಣ್ಯಕ್ಷೇತ್ರವು ನೀನು, ನಾನು ಯಾತ್ರಿಕನು.
ಎಲ್ಲವನು ತೊರೆದಿರುತ ನಿನ್ನ ನುತಿಪೆ.
ಸೊಡರು ನೀನಾದೊಡೇನ್, ನಾನದರ ಕಿರಿಬತ್ತಿ
ನಿನ್ನ ತರದಿನ್ನಾರ ಕಾಣೆ ದೇವ.

---

# ಬಾಳು

ಬೆಳಗಿನಲಿ ಜನಿಸಿ ಜಗಕಿಳಿದು ಪನಿಯೊಂದು
ಮುಗುದೆಮೂಗಿನ ಮೂಗುತಿಯ ಮುತ್ತಿನಂತೆ
ಬಾನಿನಾಳದಿ ಹೊಳೆವ ನಕ್ಷತ್ರದಂತೆ
ಬೆಳಗಿದುದು ನೈದಿಲೆಯ ದಳದ ನಡುನಿಂದು.

ಮಾರುತನ ಚಾಂಚಲ್ಯಚುಂಬನಕೆ ಬಳುಕಿ
ಅಲುಗಲಂಬುಜ ಹಿಮದ ಹನಿಯು ಜಲಕುದುರಿ
ತೋಡುತೊರೆ ಹರಿವಹೊಳೆ ಸಾಗರವ ಸೇರಿ
ಮಧುರ ಭೀಕರ ಹಾಡ ಹಾಡುತಿಹುದಳುಕೆ.

ವೀಚಿವೀಣೆಯ ಸಿಕ್ವಣದ ಸರಕೆ ಕುಣಿದು
ಸುಂಬನಿಯು ಸೈಕತದ ಮೋರೆಯಲಿ ಜಾರಿ
ಮೊರೆಯುತಿಹ ಬೆಲ್ದೆರೆಯ ನೊರೆಯೊಡನೆ ಹಾರಿ
ರವಿಯ ಕರೆಗೇರುವುದು ಬಾನಿಂಗೆ ದಣಿದು.

# ಒಡಲ ಕಾಣಿಕೆ

ಮಧುಮಾಸವೈತರಲು
ಮಧುರವಾದೀ ತಿರೆಯು
ಮುದದ ಹೊದಿಕೆಯ ಹೊದೆದು
ಮೆರೆಯುತಿಹುದು.
ಇಳೆಯು ವೈಭವದಿಂದ
ನಳನಳಿಸಿ ಅನುರಾಗ
ವೊಳೆಯಿಸುತ ಪ್ರಣಯಿಗಳ
ಕರೆಯುತಿಹುದು.

ಮಾಂದಳಿರ ಮರೆಯಲ್ಲಿ
ಮಂದಹಾಸದಿ ಕುಳಿತು
ಒಂದಾಗಿ ಹಾಡುತಿಹ
ಜೋಡುವಕ್ಕಿಗಳ
ಒಲವ ಬೀರುವ ನೋಟ
ನಲವ ತೋರುವ ಕೂಟ
ವಿಲಸದಿಂ ಮಿಡಿಯುತಿದೆ
ಬಗೆಯ ತಂತಿಗಳ.

ನೀರನನು ಅರಸುತ್ತ
ನೀರನಾರಿಯು ನೆರಳ
ದಾರಿಯಲಿ ಸುಳಿಸುಳಿದು
ಬಿಸುಸುಯ್ವಳು.

ಗೋಳಿಟ್ಟು ಬೇಸತ್ತು
ಗಾಳಿಯಾಳಿನ ಕೈಯ್ಯೊ-
ಳೋಲೆಯನು ಬರೆಸೀಗ
ಕಾಯುತಿಹಳು.

ಬಾನಿನಂತಃಪುರಕೆ
ಮೋನನಗೆಯನು ನಗುತ
ಸಾನುರಾಗದಿ ಚಂದ್ರ
ಏರಿ ಬರುತಿಹನು.
ನೀಲದುಡುಗೆಯನುಟ್ಟು
ಮಾಲೆಯುಡುಗಳ ತೊಟ್ಟು
ಬಾಲೆಯಾಮಿನಿ ಜವದಿ
ಸಾರಿ ಬರುತಿಹಳು.

ಜಗವ ಬೆಳಗುತಲಿರುವ
ಸೊಗದ ಬೆಳದಿಂಗಳಲಿ
ನಗುಮೊಗದ ನಿನ್ನಂದ
ತೋರಲಿಲ್ಲ.
ಒಂದು ನಗೆ ನಗಲಿಲ್ಲ
ಒಂದು ಮಾತೆತ್ತಿಲ್ಲ
ಒಂದು ಮುತ್ತನು ಮೋರೆ
ಎತ್ತಿಕೊಟ್ಟಿಲ್ಲ.

ಶಶಿಯು ಕಂಡುದು ಆಯ್ತು
ನಿಶೆಯು ದಿಟ್ಟಿಸಿಯಾಯ್ತು
ಪಿಸುಗುಟ್ಟಿ ಪಿಸುಗುಟ್ಟಿ
ಬೇಸರಾಯ್ತು.

ಹೊಂದಲಾರದ ಸುಖಕೆ
ನೊಂದು ಮರುಗುವೆನೇಕೊ !
ಮುಂದಕೆಂದಿಗು ನಲ್ಮೆ-
ಯಾಸರಾಯ್ತು.

" ಬಾಳ ಸವಿಗೊಳಿಸುವೊಡೆ
ತೋಳ ತಳ್ಕೆಯಲಿಂತು
ಬೀಳಬಾರದೆ ನಲ್ಲ "
—ನಿನ್ನ ಮಾತೆ ?
ವಾಣಿಯಾಡುವ ವೀಣೆ
ಕಾಣಿಕೆಯು ಎನ್ನೊಡಲು
ರಾಣಿ ನಿನಗರ್ಪಿಸಿಹೆ
ಬೇರೆ ಮಾತೆ !

---

# ಕರೆ

ಗಿರಿಶಿಖರವನು ಹಾರಿ ತರುನಿಕರದೆಡೆ ಜಾರಿ
ಮರಳಿನಲಿ ಮೊರೆಯುತ್ತ ಹರಿದು ಬಂದು
ಸಾಲ್ಪಿಸೆಗೆ ನಗೆಸೊಗಸ ಬೀರಿ ಗುರಿಯರಿತು
ಹೊಗುತಿಹುದು ತಾಣವನು ಕಟ್ಟಕಡೆಗೆ
ಸಾಗರದ ಕರೆಗೆ.

ಭೀಮಸಂಭ್ರಮದಿಂದ ಗಾಂಭೀರ್ಯಗತಿಯಿಂದ
ಮೊಳಗಿ ಮಾರ್ದನಿಗುಡುತ ಉರುಳಿಯುರುಳಿ
ಘೋರ್ಗರೆಯುತಪ್ಪಳಿಸಿ ಜಲರಾಶಿ ದಡದಿಂದ
ಮರಳಿ ಧಿಮ್ಮಿಕ್ಕುತಿದೆ ಕಡಲ ಕಡೆಗೆ
ಇಳಿತದಾ ಕರೆಗೆ.

ಮಣ್ಣಿನಡಿಯಲಿ ಅಡಗಿ ಮರೆಯಾದ ಅಂಕುರವು
ಮಳೆನೀರು ಸೋಂಕಿದೊಡೆ ಮೊಳಕೆಯಾಗಿ
ನೆಲದ ಹೊದಿಕೆಯನೊಗೆದ ಬಯಲ ಬಸಿರನು ಬಗೆದು
ಬರುತಿಹುದು ತಲೆ ಎತ್ತಿ ಬೆಳಕ ಕಡೆಗೆ
ಜೀವನದ ಕರೆಗೆ.

ಶಾಂತಿಸಂಧ್ಯೆಯ ಕಾಲ ಗಗನಮಂಡಲದಲ್ಲಿ
ಅರಿಲುಗಳು ಸರಸದಲಿ ಹೊಳೆದು ಆಡಿ
ಶೂನ್ಯದಲಿ ದಾರಿಯನು ಕಂಡು ಹಗಲಿರುಳೆಲ್ಲ
ಸುತ್ತುತಿಹವನವರತ ಸುತ್ತ ರವಿಗೆ
ಬಾಂದಳದ ಕರೆಗೆ.

ಎನ್ನ ಪ್ರಾಣದ ಪ್ರಾಣ ಎನ್ನ ಕಡಲಿನ ಕಡಲು
ನೀನೆನ್ನ ಜೀವನದ ಇಳಿತ ಭರತ
ಹಂಬಲಿಕೆ ಸಾಕಾಯ್ತು ನಾಕಾಯ್ತುದಾಯ್ತು
ಎತ್ತಣಿದ್ದರು ಬರುವೆ ನಿನ್ನ ಬಳಿಗೆ
ನಲ್ಲೆಯಾ ಕರೆಗೆ.

ನೀನೆನ್ನ ಬಾಳ್ವಿಕೆಯ ಬಾಂದಳದ ಬೆಳಕೆಂದು
ಇನ್ನೊಮ್ಮೆ ಹೇಳುವೆನು ಕೇಳು ನೀರೆ
ಅನುದಿನವು ನೆನೆನೆನೆದು ಮನನೊಂದು ಬೇಸತ್ತೆ
ಹೇಗಿಹೆಯೊ ನಾನರಿಯೆ ಬರುವೆ ಮನೆಗೆ
ಪ್ರೇಮದಾ ಕರೆಗೆ

---

# ಸಂದರ್ಭ

ಬರಲಾರೆ ನಾನೆಂದು ಬಿಸುಸುಯ್ಯುತಿಹಿರೇಕೆ
ಪರಿಪರಿಯ ಸಾಧನದಿ ಚಿಗುರಿಹುದು ಬಾಳು.
ಬರನೆಂಬ ಹಂಬಲದಿ ಬಾಡಿ ಬೀಳ್ವುದಕಿಂತ
ಬರುವನೆಂಬುವ ಬಯಕೆಯಾಸೆ ಮೇಲು.

ಕಳೆದೋದ ಸಂದರ್ಭಗಳಿಗೆ ಕೂಗಲು ಬೇಡಿ
ಸ್ವರ್ಣಯುಗ ಹೋಯ್ತೆಂದು ಅಳಬೇಡಿರಿ
ಕತ್ತಲೆಯ ಮತ್ತೆ ಬೆಳಕೆಂಬ ಭರವಸೆಯುಹುದು
ಅತ್ತು ಫಲವಿನಿತಿಲ್ಲ ನಕ್ಕುಬಿಡಿರಿ.

ಅಲಸತನ ಫಲವಾಗಿ ಕೆಸರ ಕೂಪದಿ ಬಿದ್ದು
ಕಷ್ಟಗಳನನುಭವಿಸುತಿರುವಿರೇನು ?
ಈ ಬವಣೆ ಬಂತೆಂದು ಹಣೆಯ ಹೊಡಕೊಳ್ಳುತ್ತ
ವಿಧಿಯನ್ನು ದೂರದಿರಿ. ಇರುವೆ ನಾನು.

ಮಾಯವಾಗಿಹ ಸೌಖ್ಯಸಿರಿಸಂಪದಂಗಳಿಗೆ
ಮುದ್ರೆಯನ್ನೊತ್ತಿರುವೆ. ಭಯವ ಬಿಡಿರಿ.
ಹಗಲತಪ್ಪುಗಳನ್ನು ಸುಡುವೆ ನಾ ರಾತ್ರಿಯಲಿ
ಪೊಸತಾಗಿ ಮುಂಜಾನೆ ಬರುವೆ ನೋಡಿ.

ಬರುತಿಹೆನು, ಬಂದಿರುವೆ. ತುದಿಯಿಲ್ಲ ಮೊದಲಿಲ್ಲ
ಕಾಲದೇಶಗಳನ್ನು ಗಣನೆಮಾಡೆ
ತ್ರಿಜಗಮಂಡಲಗಳಲಿ ಯುಗದಾದಿ ಅಂತ್ಯದಲಿ
ಸಾವುಬಾಳ್ಕೆಗಳಲ್ಲಿ ಉಸಿರನಿಡುವೆ.

ಮೇರೆಮೀರಿಹ ಘೋರ ಶೂನ್ಯತೆಯ ಶರಧಿಯಲಿ
ಜಾರಿದವರನ್ನೆತ್ತ ಸಿದ್ಧನಿಹೆನು.
ಹುರುಪಿಂದ ಕೆಚ್ಚಿಂದ ಮತ್ತೆ ತುಸ ಬಲದಿಂದ
ಈಜುತ್ತ ದಡಸೇರಬಾರದೇನು ?

ದಿವ್ಯ ಸಂದರ್ಭಗಳ ಜಾರಬಿಡುತಲಿ ನೀವು
ಜೀವನದ ಪುಸ್ತಕದ ಕೊಳಕು ಚೆಲ್ಲಿ
ಈಗ ಮರುಗುವಿರೇಕೆ ? ಇನ್ನಿರುವ ಪುಟಮಾತ್ರ
ಬಿಳಿಮಂಜ ತೆರದಿ ಅತಿ ಶುಭ್ರವಿರಲಿ.

ಪ್ರತಿದಿನವು ಮುಂಜಾನೆ ರೌದ್ರರೌರವದಿಂದ
ಹಾರುವೊಡೆ ನಾ ನಿಮಗೆ ಕೊಡುವೆ ರೆಕ್ಕೆ
ಪ್ರತಿರಾತ್ರಿ ಕಾಣುವಿರಿ ನಾಕಕ್ಕೆ ದಾರಿಯನು
ತೋರುತಿಹ ಧ್ರುವತಾರೆ. ಭಯವೇತಕೆ ?

ಅನುತಾಪಪಟ್ಟೊಡನೆ ಪಾಪಗಳಿಗಿಹುದು ಕ್ಷಮೆ
ಸಮರಸ ಜೀವನಾನಂದವಿರದೇ ?
ತುಂಡಾದ ಜೀವನವ ಒಂದಾಗಿ ಮಾಡುವೊಡೆ
ಸಂದರ್ಭವಿಹುದದಕೆ ಸಂದೇಹವಿಹುದೇ ?

---

# ಮುರಿದ ಮುರಲಿ

ಮುರಿದಿದ್ದ ಮುರಲಿಯನು ಮೇಲೆತ್ತಿ ನೋಡು; ಗಾಯನವು ಅದರಲ್ಲಿ
ಬೆರಳುಗಳು ಸರಸರನೆ ನಡೆದರೂ ಏನು ? ಮಧುರಸರ ಹೊರಡು
ಜೀವನವು ಪುಡಿಮಾಡಿದೊಡಲಿನಾ ಪಾಡು ಬಿರುಕೆದ್ದ ಕೊಳಲಿನಂತೆ.
ಮುರಿದ ಮುರಲಿಯು ನಾನು. ಎನ್ನೊಡಲ ನೀನು ಕೌಶಲದಿ
ಮುರಿದೆಯ

---

# ತಿದ್ದುಪಡಿ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೫ | ೧೭ | ಯೊವ | ಯಾವ |
| ೯ | ೧೦ | ಬಾಸ್ ಗಾನ | ಚಾಸ್ ಗಾನ |
| ೨೧ | ೧೩ | ಪಾಡ್ಡನದಿ | ಪಾಡ್ವನದಿ |
| ೩೭ | ೨ | ರಾತ್ರಿಯೂ | ರಾತ್ರಿಯಾ |
| ೪೩ | ೧೪ | ನೀರಡುತ | ನೀರಿಡುತ |
| ೪೭ | ೫ | ಕವಿಯ | ಕವಿಯು |
| ೫೪ | ೩ | ನೋವಿನೋಲುಗ | ನೋವಿನೋಲಗ |
| ೬೭ | ೧೩ | ವಿಭವು | ವಿಭವ |
| ೬೯ | ೧೫ | ಮಧವನು | ಮಧುವನು |
| ೭೬ | ೩ | ನುಸುಳ | ನುಸುಳಿ |
| ೮೬ | ೧೨ | ಬೆಲ್ದಿರೆಯ | ಬಲ್ದಿರೆಯ |

